# ಚಿತ್ಪಾವನೀ ಭಾಷೆಯಲ್ಲಿ ವ್ಯಾಕರಣ



**ಚಿದಂಬರ ಕಾಕತ್ಕರ್**

ವ್ಯಾಕರಣದ ಚೌಕಟ್ಟು ಇಲ್ಲದ ಯಾವ ಭಾಷೆಯೂ ಪ್ರಪಂಚದಲ್ಲಿ ಇರಲಾರದು. ಚಿತ್ಪಾವನೀ ಭಾಷೆಗೂ ಶಿಸ್ತುಬದ್ಧವಾದ ವ್ಯಾಕರಣ ಇದೆ. ಅದನ್ನು ನಾವು ಅರಿಯದೆಯೇ ಅನುಸರಿಸುತ್ತಲೂ ಇದ್ದೇವೆ. ಅದರ ಒಂದಷ್ಟು ಪ್ರಮುಖ ಅಂಶಗಳನ್ನು ದಾಖಲೀಕರಣಗೊಳಿಸುವ ಪ್ರಯತ್ನ ಇದು.

ಈ ದಿಸೆಯಲ್ಲಿ ಮುಂದುವರಿಯುವುದಕ್ಕೆ ಮೊದಲು ಚಿತ್ಪಾವನೀ ಭಾಷೆಯ ಕೆಲವು ವಿಶಿಷ್ಟ ಉಚ್ಚಾರಗಳು ಮತ್ತು ಅವುಗಳನ್ನು ಅಕ್ಷರ ರೂಪದಲ್ಲಿ ಹೇಗೆ ತೋರಿಸಬೇಕೆಂದು ತಿಳಿದುಕೊಳ್ಳಬೇಕಾಗುತ್ತದೆ.

## ಚಿತ್ಪಾವನೀ ಉಚ್ಚಾರ ಮತ್ತು ಲಿಪಿ




ಹಿಂದಿನಿಂದಲೂ ಚಿತ್ಪಾವನೀ ಮನೆಮಾತಿನ ದಕ್ಷಿಣ ಕನ್ನಡದ ಚಿತ್ಪಾವನರು ಬಂಧು ಬಾಂಧವರೊಂದಿಗೆ ಪತ್ರ ವ್ಯವಹಾರ, ದಿನಚರಿ ಬರವಣಿಗೆ, ಲೆಕ್ಕಪತ್ರ ಇಡುವುದು ಇತ್ಯಾದಿಗಳನ್ನು ಕನ್ನಡದಲ್ಲೇ ನಿರ್ವಹಿಸಿಕೊಂಡು ಬಂದಿರುವುದು. ದೇವನಾಗರೀ ಲಿಪಿ ಬಳಸಿ ಕನ್ನಡದಲ್ಲಿ ಬರೆದ ಉದಾಹರಣೆಗಳೂ ಇವೆ. ಇದನ್ನು ಚಿತ್ಪಾವನೀ ಭಾಷೆಯಲ್ಲೇ ಮಾಡುತ್ತಿದ್ದರೆ ನಮಗೆ ಅನೇಕ ಹಳೆ ಚಿತ್ಪಾವನೀ ಶಬ್ದಗಳು ಮತ್ತು ಅವುಗಳ ಉಚ್ಚಾರ ಲಿಖಿತ ರೂಪದಲ್ಲಿ ಲಭ್ಯವಾಗುತ್ತಿತ್ತು.

ಚಿತ್ಪಾವನೀ ಭಾಷೆಗೆ ಸ್ವಂತ ಲಿಪಿ ಇಲ್ಲ ಎಂದು ಕೆಲವರಲ್ಲಿ ಕೀಳರಿಮೆ ಇದೆ. ಆದರೆ ಇದು ಅರ್ಥ ಹೀನ. ಸ್ವಂತ ಲಿಪಿ ಇಲ್ಲದ ಬೇರೆ ಪ್ರಸಿದ್ಧ ಭಾಷೆಗಳು ಅನೇಕ ಇವೆ. ಇಂಗ್ಲೀಷ್ ಬರೆಯಲ್ಪಡುವುದು ರೋಮನ್ ಲಿಪಿಯಲ್ಲಿ. ಸಂಸ್ಕೃತ, ಹಿಂದಿ ಹಾಗೂ ಬಹುತೇಕ ಉತ್ತರ ಭಾರತೀಯ ಭಾಷೆಗಳು ಬಳಸುವುದು ದೇವನಾಗರೀ ಲಿಪಿ. ತುಳು/ತಿಗಳಾರಿ ಲಿಪಿ ಬಳಸಿ ಸಂಸ್ಕೃತ ಉದ್ಗ್ರಂಥಗಳನ್ನು ಬರೆದ ಪಂಡಿತರೂ ಇದ್ದರಂತೆ. ಸ್ವಂತ ಲಿಪಿ ಇರುವುದಕ್ಕೂ ಭಾಷೆಯ ಸಮೃದ್ಧಿಗೂ ಸಂಬಂಧ ಇಲ್ಲ.

ಕಾಲಾಂತರದಲ್ಲಿ ಅಪರೂಪಕ್ಕೆ ಕನ್ನಡ/ದೇವನಾಗರೀ ಲಿಪಿಯ ಚಿತ್ಪಾವನೀ ಭಾಷಾ ಲೇಖನಗಳು, ಪುಸ್ತಕಗಳು ಬಂದಿವೆಯಾದರೂ ಅಂತರ್ಜಾಲ ಕ್ರಾಂತಿ ಆಗಿ ಸಾಮಾಜಿಕ ಜಾಲತಾಣಗಳು ಬೆರಳ ತುದಿಯಲ್ಲಿ ಸಿಗತೊಡಗಿದ ಮೇಲಷ್ಟೇ ಅನೇಕರಿಗೆ ಚಿತ್ಪಾವನಿಯಲ್ಲಿ ಬರೆಯುವ ಹುಮ್ಮಸ್ಸು ಹುಟ್ಟಿದ್ದು. ಈಗ ಹೆಚ್ಚಿನವರು ಕನ್ನಡ ಅಥವಾ ದೇವನಾಗರೀ ಲಿಪಿ ಬಳಸಿ ಚಿತ್ಪಾವನಿಯಲ್ಲಿ ಬರೆಯುತ್ತಾರೆ. ಕೆಲವರು ಚಿಂಗ್ಲಿಷ್, ಅಂದರೆ ರೋಮನ್ ಲಿಪಿಯಲ್ಲಿ ಚಿತ್ಪಾವನೀ ಬರೆಯುವವರೂ ಇದ್ದಾರೆ. ಆದರೆ ತಾಂತ್ರಿಕವಾಗಿ ಮತ್ತು ಭಾವನಾತ್ಮಕವಾಗಿ ಇದು ಅಷ್ಟೊಂದು ಸಮಂಜಸವೆನಿಸುವುದಿಲ್ಲ.

## ವಿಶಿಷ್ಟ ಉಚ್ಚಾರದ ಚಿತ್ಪಾವನೀ ವ್ಯಂಜನಗಳು :

ಚಿತ್ಪಾವನೀ ಭಾಷೆಯ ಸ್ವರ ಮತ್ತು ವ್ಯಂಜನಗಳು ಇತರ ಪ್ರಮುಖ ಭಾರತೀಯ ಭಾಷೆಗಳಂತೆಯೇ ಆದರೂ ಚವರ್ಗ ವ್ಯಂಜನಗಳಿಗೆ ವಿಶಿಷ್ಟ ಉಚ್ಚಾರ ಇದೆ. ಈ ವಿಶಿಷ್ಟ ಉಚ್ಚಾರವನ್ನು ಅಕ್ಷರ ರೂಪದಲ್ಲಿ ಹೇಗೆ ತೋರಿಸಬೇಕು ಎಂಬುದಕ್ಕೆ ಪೂರ್ವ ನಿದರ್ಶನ ಇಲ್ಲದೇ ಇರುವುದರಿಂದ ಈಗ ಇವುಗಳನ್ನು ಒಬ್ಬೊಬ್ಬರು ಒಂದೊಂದು ರೀತಿ ಬರೆಯುತ್ತಾರೆ.

## ವರ್ಗೀಯ ವ್ಯಂಜನಗಳ ವೈಜ್ಞಾನಿಕ ವರ್ಗೀಕರಣ :

ಕಚಟತಪ ಅಕ್ಷರದಿಂದ ಆರಂಭ ಆಗುವ ವರ್ಗೀಯ ವ್ಯಂಜನಗಳನ್ನು ಅವು ಬಾಯಿಯಿಂದ ಉತ್ಪನ್ನವಾಗುವ ಸ್ಥಾನಕ್ಕೆ ಹೊಂದಿಕೊಂಡು ವಿವಿಧ ವಿಭಾಗಗಳಾಗಿ ವಿಂಗಡಿಸಲಾಗಿದೆ.




### ಕಂಠ್ಯ

ಕಿರುನಾಲಗೆಯ ಸಹಾಯದೊಡನೆ ಕಂಠದಿಂದ ಉತ್ಪನ್ನ ಆಗುವ ಕವರ್ಗ ವ್ಯಂಜನಗಳು ಕ, ಖ, ಗ, ಘ, ಙ .

ಅ, ಆ, ಇ, ಈ ಇತ್ಯಾದಿ ಸ್ವರಗಳು ಕೂಡ ಕಂಠದಿಂದಲೇ ಉತ್ಪನ್ನವಾಗುವುದು, ಆದರೆ ಇವುಗಳಿಗೆ ಕಿರುನಾಲಗೆಯ ಬಳಕೆ ಇಲ್ಲ.

## ತಾಲವ್ಯ

ತಾಲುವಿನ (ಬಾಯಿಯೊಳಗಿನ ಮೇಲ್ಭಾಗ, ಅಂಗುಳು. ಚಿತ್ಪಾವನಿಯಲ್ಲಿ ಟಾಟ್ಸಾರೊ.) ಮೃದು ಭಾಗಕ್ಕೆ ನಾಲಿಗೆಯ ಮಧ್ಯಭಾಗ ಸ್ಪರ್ಶಿಸಿ ಉತ್ಪನ್ನವಾಗುವ ಚವರ್ಗ ವ್ಯಂಜನಗಳು ಚ, ಛ, ಜ, ಝ, ಞ.

## ಮೂರ್ಧನ್ಯ

ತಾಲುವಿನ ಗಟ್ಟಿ ಭಾಗಕ್ಕೆ ನಾಲಗೆಯ ತುದಿ ತಾಗಿ ಉತ್ಪನ್ನವಾಗುವ ಟವರ್ಗ ವ್ಯಂಜನಗಳು ಟ, ಠ, ಡ, ಢ ಣ.

## ದಂತ್ಯ

ಹಲ್ಲುಗಳ ಒಳ ಭಾಗಕ್ಕೆ ನಾಲಗೆಯ ತುದಿ ತಾಗಿ ಉತ್ಪನ್ನವಾಗುವ ತವರ್ಗ ವ್ಯಂಜನಗಳು ತ, ಥ, ದ, ಧ, ನ.

## ಓಷ್ಠ್ಯ

ನಾಲಗೆಯ ಅಗತ್ಯ ಇಲ್ಲದೆ ತುಟಿಗಳ ಸಹಾಯದಿಂದ ಉತ್ಪನ್ನವಾಗುವ ಪವರ್ಗ ವ್ಯಂಜನಗಳು ಪ, ಫ, ಬ, ಭ, ಮ.

ಯ, ರ, ಲ, ವ ಇತ್ಯಾದಿ ಅವರ್ಗೀಯ ವ್ಯಂಜನಗಳು ವಿವಿಧ ವರ್ಗಗಳಲ್ಲಿ ಹಂಚಿ ಹೋಗಿವೆ.

ಈಗ ಚಿತ್ಪಾವನೀ ಭಾಷೆಯ ವಿಶಿಷ್ಟ ಉಚ್ಚಾರದ ಚವರ್ಗದ ವ್ಯಂಜನಗಳು ಬಾಯಿಯ ಯಾವ ಸ್ಥಾನದಿಂದ ಉತ್ಪನ್ನವಾಗುತ್ತವೆ ಎಂಬ ಪ್ರಶ್ನೆ ಮೂಡುತ್ತದೆ. ನಾವು ಅವುಗಳನ್ನು ಉಚ್ಚರಿಸಿ ನೋಡಿದಾಗ ನಾಲಗೆಯು ದೋಣಿಯಂತೆ ಒಳಕ್ಕೆ ಮಡಚಿ ಟವರ್ಗ ಉತ್ಪನ್ನವಾಗುವ ತಾಲುವಿನ ಕಠಿಣ ಭಾಗ, ಮತ್ತು ತವರ್ಗ ಉತ್ಪನ್ನವಾಗುವ ಹಲ್ಲುಗಳ ಒಳ ಭಾಗದ ಮಧ್ಯ ತಾಲುವಿಗೆ ತಾಗುವುದು ಗೊತ್ತಾಗುತ್ತದೆ. ದೋಣಿಯಂತೆ ಮಡಚಿರುವ ನಾಲಿಗೆಯ ಮೂಲಕ ಗಾಳಿ ಹೊರ ಸೂಸುವುದರಿಂದ ಉಚ್ಚಾರದಲ್ಲಿ ತಕಾರದೊಡನೆ ಸ್ವಲ್ಪ ಸಕಾರವೂ ಮಿಶ್ರವಾಗುತ್ತದೆ. ಈ ವಿಶಿಷ್ಟ ಉಚ್ಚಾರದ ಅಕ್ಷರಗಳ ಉಗಮ ಸ್ಥಾನ ಕಂಠ್ಯ, ತಾಲವ್ಯ, ಮೂರ್ಧನ್ಯ, ದಂತ್ಯ, ಓಷ್ಠ್ಯ ಇವುಗಳ ಪೈಕಿ ಯಾವುದೂ ಆಗಿರದೆ ಇರುವುದರಿಂದ ಇದೊಂದು ಬೇರೆಯೇ ಚ್ಸವರ್ಗ ಎಂದು ತಿಳಿದುಕೊಳ್ಳಬೇಕಾಗುತ್ತದೆ. ಸಕಾರ ಸೇರಿರುವ ಚಿತ್ಪಾವನೀ ಚವರ್ಗದ ವ್ಯಂಜನಗಳ ಉತ್ಪತ್ತಿ ಸ್ಥಾನ ಗಮನಿಸಿದರೆ ಅವುಗಳನ್ನು ತ್ಸ, ಥ್ಸ, ದ್ಸ, ಧ್ಸ ಎಂದು ಬರೆಯಬೇಕಾಗುತ್ತದೆ. ಆದರೆ ಇದು ಅಸಹಜ ಅನ್ನಿಸುವುದರಿಂದ ಇಲ್ಲಿ ತೋರಿಸಿದಂತೆ ಮೂರು ವಿಧದಲ್ಲಿ ಬರೆಯಬಹುದು.

| | ಚ | ಛ | ಜ | ಝ |
|---|---|---|---|---|
| 1 | ಚ಼ | ಛ಼ | ಜ಼ | ಝ಼ |
| 2 | ಚ್ಸ | ಛ್ಸ | ಜ್ಸ | ಝ್ಸ |
| 3 | ಚ಼ | ತ್ಸ | ಜ಼ | ಝ಼ |

### 1. ಚ಼ ಛ಼ ಜ಼ ಝ಼.

ಚವರ್ಗದ ನಾಲ್ಕೂ ಅಕ್ಷರಗಳ ಅಡಿಗೆ ಚುಕ್ಕೆ ಬಳಸುವುದು.

ಆದರೆ ಬಹುತೇಕ ಕನ್ನಡ ಭಾಷಾ ಕೀ ಬೋರ್ಡುಗಳಲ್ಲಿ ಅಕ್ಷರದಡಿಯ ಚುಕ್ಕೆಯ ಅನುಕೂಲ ಇಲ್ಲ. ಆದ್ದರಿಂದ ಹೆಚ್ಚು ಹೆಚ್ಚು ಜನರು ಚಿತ್ಪಾವನಿ ಲಿಪಿ ಬಳಸಬೇಕು ಎಂಬ ಆಶಯಕ್ಕೆ ಇದು ಪೂರಕವಾಗುವುದಿಲ್ಲ. ಅಲ್ಲದೆ ಕಾಜ್ಞಾಂ಼ಬೊ ರೀತಿಯ ಸಂಯುಕ್ತಾಕ್ಷರಗಳಲ್ಲಿ ಇದು ತೊಂದರೆ ಕೊಡುತ್ತದೆ.

### 2. ಚ್ಸ ಛ್ಸ ಜ್ಸ ಝ್ಸ.

ಚವರ್ಗ ಮೂಲದವಾಗಿದ್ದು ಉಚ್ಚಾರದಲ್ಲಿ ಸಕಾರ ಇರುವುದರಿಂದ ಚುಕ್ಕಿ ಬದಲಿಗೆ ಸ ಅಡಿ ಒತ್ತು ಕೊಡುವುದು. ಟೈಪಿಂಗ್ ಸಮಸ್ಯೆ ಇಲ್ಲ.

### 3. ಚ಼ ತ್ಸ ಜ಼ ಝ಼

ಈಗ ಅನೇಕರು ಮಾಡುವಂತೆ ಉತ್ಸವದಿಂದ ತ್ಸ ಪಡೆದು ಚವರ್ಗದ ಉಳಿದ ಮೂರು ಅಕ್ಷರಗಳನ್ನು ಚುಕ್ಕಿಯೊಂದಿಗೆ ಬಳಸುವುದು. ಆದರೆ ಆಗಲೇ ಹೇಳಿದಂತೆ ಇಲ್ಲಿ ತ್ಸ ಹೊರತಾದ ಇತರ ಅಕ್ಷರಗಳಿಗೆ ಅಡಿ ಚುಕ್ಕಿ ಟೈಪಿಂಗ್ ಸಮಸ್ಯೆ ಇದೆ.

ಕನ್ನಡದಲ್ಲಿ **ಸೂರ್ಯ, ಸೂರ್ಯ** ಇತ್ಯಾದಿ ವೈವಿಧ್ಯ ಇರುವಂತೆ, ಇಲ್ಲಿರುವ ಸಾಧ್ಯತೆಗಳ ಪೈಕಿ ತಮ್ಮ ಕೀ ಬೋರ್ಡಿಗೆ ಯಾವುದು ಸೂಕ್ತ ಎಂಬ ನಿರ್ಧಾರವನ್ನು ಬಳಸುವವರ ವಿವೇಚನೆಗೆ ಬಿಡಬಹುದು. ನಾನು ಯಾವ ಕೀ ಬೋರ್ಡಿಗೂ ಸಲ್ಲುವ, ನಾಲ್ಕೂ ಅಕ್ಷರಗಳಿಗೆ ಸ ಅಡಿ ಒತ್ತು ಕೊಡುವ ಎರಡನೇ ಪದ್ಧತಿಯನ್ನು ಅನುಸರಿಸಿದ್ದೇನೆ.

**ಚವರ್ಗ ವ್ಯಂಜನಗಳಿಗೆ ಯಾವಾಗಲೂ ವಿಶಿಷ್ಟ ಉಚ್ಚಾರವೇ ಎಂದಿಲ್ಲ.**

ಉದಾ:-

ಚೇರಣಿ ಎಂದು ಹೇಳುವುದೇ ಹೊರತು ಚ್ಸೇರಣಿ ಎಂದಲ್ಲ.

ಛಿಂಪುಟ ಎಂದು ಹೇಳುವುದೇ ಹೊರತು ಛ್ಸಿಂಪುಟ ಎಂದಲ್ಲ.

**ಅನ್ಯ ಭಾಷೆಯ ಪದಗಳಿಗೂ ವಿಶಿಷ್ಟ ಉಚ್ಚಾರದಿಂದ ವಿನಾಯ್ತಿ ಇದೆ.**

ಜೀಭ, ಜಾಮೀನ, ಚರಕ, ಚರಂಡಿ, ಚಾ, ಚಕ್ಕುಲಿ, ಛಾವಣಿ, ಝಿಲ್ಬ್ಯೋ ಇತ್ಯಾದಿ.

## ಅನುನಾಸಿಕಕ್ಕೆ ಅನುಸ್ವಾರದ ಪ್ರಯೋಗ




ಚಿತ್ಪಾವನಿಯಲ್ಲಿ ಕಿತಂ, ಬರಂ, ಆಯ್ಲೊಂ, ಗೆಲ್ಲೊಂ ಮುಂತಾದವುಗಳಂತೆ ಅನುನಾಸಿಕಯುಕ್ತ ಉಚ್ಚಾರದ ಅಕ್ಷರಗಳು ಬಹಳ ಇವೆ. ಇದರಿಂದಾಗಿ ಕೆಲವರು ಚಿತ್ಪಾವನಿಯನ್ನು ಕಿತಂ ಬರಂ ಭಾಷೆ ಎಂದೂ ಗುರುತಿಸುವುದುಂಟು. ಇಂತಹ ಅನುನಾಸಿಕಯುಕ್ತ ಉಚ್ಚಾರದ ಅಕ್ಷರಗಳನ್ನು ಅನುಸ್ವಾರ ಬಳಸಿ ಬರೆದರೆ ಕಿತಮ್, ಬರಮ್, ಆಯ್ಲೊಮ್ ಎಂದಾಗುವುದಿಲ್ಲವೇ ಎಂದೆಣಿಸಿ ಕೆಲವರು ಡಿಗ್ರಿ ಚಿಹ್ನೆ( ° ) ಅಥವಾ ನಕ್ಷತ್ರ ಚಿಹ್ನೆ( * ) ಬಳಸುವುದುಂಟು. ಇವು ಎಲ್ಲ ಕೀ ಬೋರ್ಡುಗಳಲ್ಲಿ

ಇರುವುದಿಲ್ಲ ಮತ್ತು ಲಿಪಿಯ ಅಂದವನ್ನೂ ಕೆಡಿಸುತ್ತವೆ. ಅಲ್ಲದೆ ಅನುಸ್ವಾರಕ್ಕೆ ಯಾವಾಗಲೂ ಮ್ ಎಂದೇ ಉಚ್ಚಾರ ಅಲ್ಲ. ವ್ಯಂಜನಗಳ ಯಾವ ವರ್ಗದ ಅಕ್ಷರಕ್ಕಿಂತ ಮೊದಲು ಅನುಸ್ವಾರ ಬರುತ್ತದೋ, ಆ ಪ್ರಕಾರ ಉಚ್ಚಾರ ಇರುವುದು.

ಕ ವರ್ಗಕ್ಕೆ ಙ. ಆಂಕುಡಿ ಎಂದು ಬರೆದರೆ ಉಚ್ಚಾರ ಆಙ್ಕುಡಿ, ಆಮ್ಕುಡಿ ಅಲ್ಲ.

ಚ ವರ್ಗಕ್ಕೆ ಞ. ಕುಂಚಿ ಎಂದು ಬರೆದರೆ ಉಚ್ಚಾರ ಕುಞ್ಚಿ, ಕುಮ್ಚಿ ಅಲ್ಲ.

ಟ ವರ್ಗಕ್ಕೆ ಣ. ಮಾಂಡೋವು ಎಂದು ಬರೆದರೆ ಉಚ್ಚಾರ ಮಾಣ್ಡೋವು, ಮಾಮ್ಡೋವು ಅಲ್ಲ.

ತ ವರ್ಗಕ್ಕೆ ನ. ಸಾಂದಣ ಎಂದು ಬರೆದರೆ ಉಚ್ಚಾರ ಸಾನ್ದಣ, ಸಾಮ್ದಣ ಅಲ್ಲ.

ಪ ವರ್ಗಕ್ಕೆ ಮ. ಆಂಬಟ ಎಂದು ಬರೆದರೆ ಉಚ್ಚಾರ ಆಮ್ಬಟ ಹೌದು. ಏಕೆಂದರೆ ಇಲ್ಲಿ ವರ್ಗದ ಕೊನೆಯ ಮ.

ವ್ಯಾಕರಣ ಶಾಸ್ತ್ರ ಪ್ರಕಾರ ವ್ಯಂಜನ ವರ್ಗದ ಪ್ರಕಾರವೇ ಅನುನಾಸಿಕ ಬಳಸಬೇಕು. ಆದರೆ ಈಗ ಕನ್ನಡದಲ್ಲಿ ಕೂಡ ಎಲ್ಲದಕ್ಕೂ ಅನುಸ್ವಾರವನ್ನೇ ಬಳಸುವ ಪದ್ಧತಿ ಇದೆ. ಸಂಸ್ಕೃತದಲ್ಲಿ ಈಗಲೂ ವ್ಯಂಜನ ವರ್ಗದ ಪ್ರಕಾರವೇ ಅನುನಾಸಿಕ ಬಳಸುವ ಪದ್ಧತಿ ಉಳಿದಿದೆ.

ಹೀಗಾಗಿ ಚಿತ್ಪಾವನಿ ಭಾಷೆಯ ಅನುನಾಸಿಕಯುಕ್ತ ಶಬ್ದಗಳನ್ನು ಅನುಸ್ವಾರ ಬಳಸಿ ಬರೆಯಬಹುದು. ಶಬ್ದದ ಕೊನೆಯ ಅಕ್ಷರಕ್ಕೆ ಅನುಸ್ವಾರ ಬಂದರೆ ಉಚ್ಚಾರ ಮ್ ಅಲ್ಲ, ಅದು ಅನುನಾಸಿಕ ಎಂದು ತಿಳಿದುಕೊಂಡರಾಯಿತು. ಒಂದು ವೇಳೆ ಕೊನೆಗೆ ಮ್ ಉಚ್ಚಾರದ ಅಪರೂಪದ ಶಬ್ದ ಬರೆಯಲಿಕ್ಕಿದ್ದರೆ ಆಗ ಅನುಸ್ವಾರದ ಬದಲಿಗೆ ಮ್ ಎಂದು ಬರೆಯಬಹುದು.

ಉದಾ : ಮುಸಲ್ಮಾನಾಯಿಂ ಮೊಹರಮ್ ಆಚರಣಾ ಕೆಲ್ಲಿಂ. ಸಂಗಮ್ ಸಿನೆಮಾಂತು ಅವ್ವಲಂ ಪದ್ಯಂ ಟ್ಸಲಿಂ. ಈ ಪದ್ಧತಿ ಅನುಸರಿಸಿ ಬರೆದ ವಾಕ್ಯಗಳಲ್ಲಿ ಎಲ್ಲಿ ಮ್ ಉಚ್ಚಾರ, ಎಲ್ಲಿ ವ್ಯಂಜನವರ್ಗ ಪ್ರಕಾರ ಉಚ್ಚಾರ, ಎಲ್ಲಿ ಅನುನಾಸಿಕ ಎಂಬ ಪ್ರಶ್ನೆ ಉದ್ಭವಿಸಲಾರದು.

# ಅಕಾರಾಂತ ಅಕ್ಷರಗಳ ದೀರ್ಘ ಉಚ್ಚಾರ.

ಚಿತ್ಪಾವನಿಯಲ್ಲಿ ಹ್ರಸ್ವ ಅಕ್ಷರಗಳು ದೀರ್ಘ ಉಚ್ಚಾರ ಹೊಂದುವ ಶಬ್ದಗಳು ತುಂಬಾ ಇವೆ. ಹೆಚ್ಚಾಗಿ ಕೊನೆಯ ಅಕ್ಷರಕ್ಕಿಂತ ಹಿಂದಿನ ಹ್ರಸ್ವ ಅಕ್ಷರ ದೀರ್ಘವಾಗಿ ಉಚ್ಚರಿಸಲ್ಪಡುತ್ತದೆ.

ಉದಾಃ ಅಽಳುಂ, ಬಽರಂ, ಶಽಳ, ಖಽರ, ಘಽರ, ಗವಽತ, ರಗಽತ, ಸಖಽಲ, ಮಳಽಭ ಇತ್ಯಾದಿ.

ಮೂರು ಅಕ್ಷರಗಳ ಶಬ್ದದಿಂದ ಒಂದು ಅಕ್ಷರ ತೆಗೆದರೆ ಉಳಿದುದರಲ್ಲಿ ಒಂದು ಹ್ರಸ್ವ ಅಕ್ಷರ ದೀರ್ಘ ಉಚ್ಚಾರ ಹೊಂದುವುದಿದೆ. ಉದಾಃ

ರೋವಳಿ ಶಬ್ದದಿಂದ ರೋ ತೆಗೆದರೆ ಉಳಿದ ವಳಿ ಶಬ್ದದಲ್ಲಿ ವ ಅಕ್ಷರ ದೀರ್ಘ ಉಚ್ಚಾರ ಪಡೆದು ವಽಳಿ ಎಂದು ಉಚ್ಚರಿಸಲ್ಪಡುತ್ತದೆ. ಪಡಳಿ ಶಬ್ದದಿಂದ ಡ ತೆಗೆದರೆ ಉಳಿದ ಪಳಿ ಶಬ್ದ ಪಽಳಿ ಆಗುತ್ತದೆ. ಇಲ್ಲಿ ವ್ಯತ್ಯಾಸ ತಿಳಿಯುವ ಸಲುವಾಗಿ ದೀರ್ಘ ಉಚ್ಚಾರದ ಅಕ್ಷರಗಳಿಗೆ ಅವಗ್ರಹ (ಽಽ) ಚಿಹ್ನೆ ಬಳಸಲಾಗಿದೆ. ಆದರೆ ಬರೆಯುವಾಗ ಯಾವಾಗಲೂ ಈ ಚಿಹ್ನೆ ಬಳಸಬೇಕೆಂದಿಲ್ಲ. ಇಂತಹ ಅಕ್ಷರಗಳು ಚಿತ್ಪಾವನಿಯಲ್ಲಿ ಬಹಳಷ್ಟು ಇರುವುದರಿಂದ ಅವಗ್ರಹ ಬಳಸುತ್ತಾ ಹೋದರೆ ಲಿಪಿ ಅಂದಗೆಡಬಹುದು. ಓದುವವರು ಮತ್ತು ಮಾತನಾಡುವವರು ಅನುಭವದಿಂದ ಎಲ್ಲಿ ದೀರ್ಘ ಉಚ್ಚಾರ ಇರಬೇಕು, ಎಲ್ಲಿ ಬೇಡ ಎಂದು ನಿರ್ಧರಿಸಬೇಕು.

ಕೆಲವೊಮ್ಮೆ ಶಬ್ದದ ಒಂದು ಅಕ್ಷರ ದೀರ್ಘ ಇದ್ದರೆ ಒಂದು ಅರ್ಥ, ಹ್ರಸ್ವ ಇದ್ದರೆ ಇನ್ನೊಂದು ಅರ್ಥ ಇರುವುದೂ ಉಂಟು. ಉದಾಃ ಕಳಿ(ಮಾದಕ ಪೇಯ ಕಳ್ಳು) ಮತ್ತು ಕऽಳಿ(ಹೂವಿನ ಮೊಗ್ಗು). ಕऽಸೆ (ಅಂಗಿ, ಕುಲಾವಿಗಳಲ್ಲಿ ಬಳಸಲಾಗುವ ಬಟ್ಟೆಯ ಹಗ್ಗ) ಮತ್ತು ಕಸೆ (ಪುಲ್ಲಿಂಗ ಬಹುವಚನದಲ್ಲಿ ಹೇಗೆ ಎಂಬರ್ಥ). ಇಂತಹ ಸಂದರ್ಭದಲ್ಲಿ ಅವಗ್ರಹ ಚಿಹ್ನೆ ಬಳಸುವುದು ಒಳ್ಳೆಯದು.

# ಆಕಾರಾಂತ ಅಕ್ಷರಗಳ ಹ್ರಸ್ವ ಉಚ್ಚಾರ.

ದೀರ್ಘ ಅಕ್ಷರಗಳು ಹ್ರಸ್ವ ಉಚ್ಚಾರ ಹೊಂದುವ ಉದಾಹರಣೆಗಳೂ ಇವೆ. ಆಜ್ಜೋಳ, ಆಪ್ಪದಾ, ಆಯ್ಯೆ, ದಾದ್ದಾ ಮುಂತಾದ ಶಬ್ದಗಳಲ್ಲಿ ಎರಡು ಮಾತ್ರಾ ಕಾಲದ ಆ ಅಕ್ಷರದ ಉಚ್ಚಾರ ಹ್ರಸ್ವ ಆಗಿ ಒಂದು ಮಾತ್ರಾ ಕಾಲದ್ದಾಗುತ್ತದೆ.

# ರೂಢಿಗತ ನಿಯಮ.

`ಅ'ಕಾರ ಎರಡು ಮಾತ್ರಾಕಾಲದ ದೀರ್ಘವಾಗುವುದಿರಲಿ, `ಆ'ಕಾರ ಒಂದು ಮಾತ್ರಾಕಾಲದ ಹ್ರಸ್ವವಾಗುವುದಿರಲಿ, ಸಾಮಾನ್ಯವಾಗಿ ನಂತರ ಬರುವ ಅಕ್ಷರವನ್ನು ಹೊಂದಿಕೊಂಡಿರುತ್ತದೆ. ನಂತರದ್ದು ಸಂಯುಕ್ತಾಕ್ಷರವಾದರೆ ಹಿಂದಿನದ್ದು ಒಂದು ಮಾತ್ರಾಕಾಲವೆಂದೂ, ಇಲ್ಲವಾದರೆ ಎರಡು ಮಾತ್ರಾಕಾಲವೆಂದೂ ಸ್ಥೂಲವಾಗಿ ಹೇಳಬಹುದು.

ಉದಾಃ- ಕಡ್ವಿ, ಆಗ್ಗೋಠಿ - ಇಲ್ಲಿ ಎರಡನೆಯ ಡ್ವಿ ಮತ್ತು ಗ್ಗೋ ಸಂಯುಕ್ತಾಕ್ಷರಗಳಾದ್ದರಿಂದ ಮೊದಲನೆಯ ಕ ಮತ್ತು ಆ ಅಕ್ಷರಗಳಿಗೆ ಒಂದು ಮಾತ್ರಾಕಾಲದ ಹ್ರಸ್ವ ಉಚ್ಚಾರ.

ಕऽಡು, ಆಘೋಸು - ಇಲ್ಲಿ ಎರಡನೆಯ ಡು ಮತ್ತು ಘೋ ಸಂಯುಕ್ತಾಕ್ಷರಗಳಲ್ಲ. ಹಾಗಾಗಿ `ಕ' ಮತ್ತು `ಆ' ಎರಡು ಮಾತ್ರಾಕಾಲದ ದೀರ್ಘ ಉಚ್ಚಾರ ಹೊಂದಿವೆ.

### ಚಿತ್ಪಾವನೀ ಭಾಷೆ ಮೂರು ಮಾತ್ರಾಕಾಲದ ಶಬ್ದಗಳನ್ನು ಹೆಚ್ಚು ಇಷ್ಟ ಪಡುತ್ತದೆ!

ಈಗ ಮೂರಕ್ಷರದ ಒಂದು ಉದಾಹರಣೆ ನೋಡೋಣ. ಪನ್ಥಳಿ ಮತ್ತು ಪಡಳಿ ಶಬ್ದಗಳ ಪೈಕಿ ಒಂದರಲ್ಲಿ ಎರಡನೆಯ `ನ್ಥ' ಸಂಯುಕ್ತಾಕ್ಷರ ಹಾಗೂ ಇನ್ನೊಂದರಲ್ಲಿ `ಡ' ಸಂಯುಕ್ತಾಕ್ಷರ ಅಲ್ಲ. ಆದರೆ ಎರಡರಲ್ಲೂ ಪ ಅಕ್ಷರಕ್ಕೆ ಒಂದು ಮಾತ್ರಾಕಾಲದ ಹ್ರಸ್ವ ಉಚ್ಚಾರ. ಇದಕ್ಕೆ ಕಾರಣವೇನೆಂದು ಯೋಚಿಸಿದಾಗ ಒಂದು ಸ್ವಾರಸ್ಯಕರ ಅಂಶ ಬೆಳಕಿಗೆ ಬರುತ್ತದೆ. ಅದೇನೆಂದರೆ ಚಿತ್ಪಾವನೀ ಭಾಷೆ ಮೂರು ಮಾತ್ರಾಕಾಲದ ಶಬ್ದಗಳನ್ನು ಹೆಚ್ಚು ಇಷ್ಟ ಪಡುತ್ತದೆ. ಕಮ್ಮಿ ಮಾತ್ರೆ ಇದ್ದರೆ ಹೆಚ್ಚು ಮಾಡುತ್ತದೆ, ಹೆಚ್ಚು ಇದ್ದರೆ ಕಮ್ಮಿ ಮಾಡುತ್ತದೆ, ಮೂರೇ ಮಾತ್ರಾಕಾಲ ಇದ್ದರೆ ಏನೂ ಬದಲಾವಣೆ ಮಾಡುವುದಿಲ್ಲ.

ಕನ್ನಡ ಲಿಪಿ ಬಳಸಿದಾಗ ಅಕಾರ ಮತ್ತು ಆಕಾರ ಉಚ್ಚಾರದಲ್ಲಿ ಕಾಣಿಸುವ ಇಂತಹ ವ್ಯತ್ಯಾಸಗಳು ದೇವನಾಗರೀ ಲಿಪಿ ಬಳಸಿದಾಗ ಎ ಮತ್ತು ಒ ಅಕ್ಷರಗಳ ಸಂದರ್ಭದಲ್ಲೂ ಕಾಣಿಸಿಕೊಳ್ಳುತ್ತವೆ. ದೇವನಾಗರಿಯಲ್ಲಿ ಏ ಮತ್ತು ಓ ಅಕ್ಷರಗಳು ಇಲ್ಲದಿರುವುದು ಇದಕ್ಕೆ ಕಾರಣ.

# ಪ್ರಾದೇಶಿಕ ವ್ಯತ್ಯಾಸ.

ಚಿತ್ಪಾವನಿಯಲ್ಲೂ ಪ್ರದೇಶದಿಂದ ಪ್ರದೇಶಕ್ಕೆ ಉಚ್ಚಾರದಲ್ಲಿ ವ್ಯತ್ಯಾಸ ಇರುತ್ತದೆ. ಕನ್ನಡದಲ್ಲಿ ಹೋಗುತ್ತದೆ ಎನ್ನಲು ಹೋಗುತ್ತೆ, ಹೋಗತ್ತೆ, ಹೋಗ್ತೈತೆ, ಹೋಗ್ತೈತಿ, ಹೋಗ್ತದ ಇತ್ಯಾದಿ ಪ್ರಾದೇಶಿಕ ರೂಪಗಳು ಇರುವಂತೆ ಚಿತ್ಪಾವನಿಯಲ್ಲಿ ಹಟ್ಸೆ ಬದಲಿಗೆ ಹಂಟ್ಸೆ, ಗೆಲ್ಲೊಳ್ಸಲೊ ಬದಲಿಗೆ ಗೆಲ್ಲೊಹಲೊ ರೀತಿಯ ವ್ಯತ್ಯಾಸಗಳು ಕಾಣಿಸುತ್ತವೆ.

# ಇತರ ಭಾಷೆಗಳಂತೆ ಚಿತ್ಪಾವನಿಯ ವ್ಯಾಕರಣದಲ್ಲೂ ಇರುವ ಕೆಲವು ಮೂಲಭೂತ ಅಂಶಗಳು.

**ಕ್ರಿಯಾಪದ** : ಏನು ಕಾರ್ಯ ಮಾಡಲ್ಪಡುತ್ತದೋ ಅದು. ಉದಾ : ಗೆಲ್ಲೊ, ಹೋಳ್ಸ್, ಉಡ್ಡಾಲಂ.

**ಕರ್ತೃ ಪದ** : ಯಾರಿಂದ/ಯಾವುದರಿಂದ ಮಾಡಲ್ಪಡುತ್ತದೋ ಅದು. ಉದಾ: ರಾಮು ಗೆಲ್ಲೊ, ಸೀತಾ , ಹೋಳ್ಸ್ , ಮಾಂಕಡ ಉಡ್ಡಾಲಂ.

**ಕರ್ಮ ಪದ** : ಕ್ರಿಯೆಯ ಪ್ರಭಾವ ಯಾವುದರ ಮೇಲಾಗುತ್ತದೋ ಅದು. ಉದಾ: ಸೀತಾ ಚೆರ್ಕುಟಂ , ಹೋಳ್ಸ್.

**ಲಿಂಗಗಳು 3** : ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕ ಲಿಂಗ.

**ವಚನಗಳು 2** : ಏಕವಚನ, ಬಹುವಚನ.

**ಕಾಲಗಳು 3** : ಭೂತಕಾಲ, ವರ್ತಮಾನಕಾಲ, ಭವಿಷ್ಯತ್ಕಾಲ.

**ಪುರುಷಗಳು 3** : ಉತ್ತಮ ಪುರುಷ (ಮೆಂ, ಆಮ್ಹಿಂ), ಮಧ್ಯಮ ಪುರುಷ (ತೂ, ತುಮ್ಹಿಂ), ಪ್ರಥಮ ಪುರುಷ (ತೋ, ತೇ, ತೀ, ತ್ಯೋ, ತಂ, ತೀಂ).

**ಅಕರ್ಮಕ, ಸಕರ್ಮಕ** : ಕ್ರಿಯಾಪದಕ್ಕೆ ಕಸಲಂ(ಏನನ್ನು) ಎಂದು ಪ್ರಶ್ನೆ ಹಾಕಿದಾಗ ಉತ್ತರ ಸಿಕ್ಕಿದರೆ ಅದು ಸಕರ್ಮಕ ವಾಕ್ಯ. ಇಲ್ಲವಾದರೆ ಅಕರ್ಮಕ.

# ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕ ಲಿಂಗ ಹಾಗೂ ಅವುಗಳ ಬಹುವಚನ ರೂಪ.




ಕನ್ನಡದಲ್ಲಿ ಮನುಷ್ಯ ಜೀವಿ ಗಂಡು ಪುಲ್ಲಿಂಗ ಮತ್ತು ಹೆಣ್ಣು ಸ್ತ್ರೀಲಿಂಗ. ಉಳಿದ ಸಕಲ ಚರಾಚರ ವಸ್ತುಗಳೆಲ್ಲವೂ ನಪುಂಸಕ ಲಿಂಗ. ಇತರ ಅನೇಕ ಭಾಷೆಗಳಲ್ಲೂ ಇದೇ ಪದ್ಧತಿ ಇರಬಹುದು. ಹಿಂದಿಯಲ್ಲಿ ಎಲ್ಲ ಪದಗಳು ಒಂದೋ ಪುಲ್ಲಿಂಗ ಇಲ್ಲವೇ ಸ್ತ್ರೀಲಿಂಗ. ಆದರೆ ಸಂಸ್ಕೃತ, ಮರಾಠಿಗಳಂತೆ ಚಿತ್ಪಾವನೀ ಭಾಷೆಯಲ್ಲಿ ಮನುಷ್ಯರಲ್ಲದ ಇತರ ಚರಾಚರ ವಸ್ತುಗಳು ಸಹ ಪುಲ್ಲಿಂಗ, ಸ್ತ್ರೀಲಿಂಗ ಅಥವಾ

ನಪುಂಸಕ ಲಿಂಗ ಆಗಿರುತ್ತವೆ. ಇವುಗಳ ಲಿಂಗ ನಿರ್ಧಾರಕ್ಕೆ ಇದಮಿತ್ಥಂ ಅನ್ನಬಹುದಾದ ನಿಯಮಗಳಿಲ್ಲದಿದ್ದು ಅನುಭವದಿಂದಲೇ ಇದನ್ನು ರೂಢಿಸಿಕೊಳ್ಳಬೇಕಾಗುತ್ತದೆ. ಹೀಗಾಗಿ ಭಾಷೆಯನ್ನು ಹೊಸದಾಗಿ ಕಲಿಯುವವರಿಗೆ ತಾವೆಲ್ಲಿ ತಪ್ಪು ಮಾಡುತ್ತೇವೋ ಎಂಬ ಅಳುಕುಂಟಾಗಿ ಮಾತನಾಡಲು, ಬರೆಯಲು ಹಿಂಜರಿಯುತ್ತಾರೆ. ಹಿರಿಯರು ಹೆಚ್ಚು ಹೆಚ್ಚು ಚಿತ್ಪಾವನಿಯಲ್ಲೇ ಮನೆಮಂದಿಯೊಂದಿಗೆ ಮಾತನಾಡುವುದನ್ನು ರೂಢಿಸಿಕೊಂಡರೆ ಈ ಸಮಸ್ಯೆಯನ್ನು ನಿವಾರಿಸಬಹುದು.

## ರೂಢಿಗತ ನಿಯಮಗಳು.

ಸಾಧಾರಣವಾಗಿ

1. ಉಕಾರಾಂತ, ಒಕಾರಾಂತ ಶಬ್ದಗಳು ಪುಲ್ಲಿಂಗವಾಗಿರುತ್ತವೆ.

ಉದಾಃ ಭಾತು, ಖೇಳು, ಪಾವೊಸು, ಮುಡೊ, ವರ್ಲಸೊ.

ಉಕಾರಾಂತ ಶಬ್ದಗಳು ಬಹುವಚನದಲ್ಲಿ ಅಕಾರಾಂತವಾಗಿ ಭಾತ, ಖೇಳ, ಪಾವಸ ಎಂದೂ ಒಕಾರಾಂತ ಶಬ್ದಗಳು ಎಕಾರಾಂತವಾಗಿ ಮುಡೆ, ವರ್ಲಸೆ ಎಂದಾಗುತ್ತವೆ.

2. ಅಕಾರಾಂತ, ಅನುನಾಸಿಕಯುಕ್ತ ಅಕಾರಾಂತ ಶಬ್ದಗಳು ನಪುಂಸಕ ಲಿಂಗವಾಗಿರುತ್ತವೆ.

ಉದಾ : ಪೊಪ್ಪಳ, ಕಾಂಬಿಟ, ಪಾಪ್ಪಾಳಂ, ಕೇಳಂ, ಬೊಂಬಂ, ತೊಸ್ಸಂ.

ಬಹುವಚನದಲ್ಲಿ ಅಕಾರಾಂತಗಳಿಗೆ ಅನುನಾಸಿಕ ಸೇರಿ ಪೊಪ್ಪಳಂ, ಕಾಂಬಿಟಂ ಎಂದಾಗುತ್ತವೆ. ಅನುನಾಸಿಕಯುಕ್ತ ಅಕಾರಾಂತಗಳು ಪಾಪ್ಪಾಳಿಂ, ಕೇಳಿಂ, ಬೊಂಬಿಂ ಎಂದು ಅನುನಾಸಿಕಯುಕ್ತ ಇಕಾರಾಂತ ಆಗುತ್ತವೆ. ತೊಸ್ಸಂ ತೊಶ್ಶಿಂ ಆಗುತ್ತದೆ.

3. ಇಕಾರಾಂತ, ಈಕಾರಾಂತ ಮತ್ತು ಆಕಾರಾಂತ ಶಬ್ದಗಳು ಸ್ತ್ರೀಲಿಂಗವಾಗಿರುತ್ತವೆ.

ಉದಾ : ಬಾವಿ, ದೋರೀ, ಏಳಾ, ಇಜ್ಜಾ, ದಯಾ, ಕ್ಷಮಾ.

ಇಕಾರಾಂತವಿದ್ದರೆ ಬಹುವಚನದಲ್ಲಿ ಈಕಾರಾಂತವಾಗಿ ಬಾವೀ, ಈಕಾರಾಂತವಿದ್ದರೆ ಯೊ ಸೇರಿ ದೋರ್ಯೊ ಹೀಗೆ ಬದಲಾಗುತ್ತವೆ. ಆಕಾರಾಂತ ಸ್ತ್ರೀಲಿಂಗ ಪದಗಳು ಬಹುವಚನದಲ್ಲಿ ಬದಲಾಗದೆ ಉಳಿಯುತ್ತವೆ. ಏಕಿ ಏಳಾ, ಚಾರಿ ಏಳಾ. ಟೋಂಕಿ, ಬೋಂಕಿಗಳಂಥ ಪದಗಳ ಬಹುವಚನದಲ್ಲಿ ಟೊಂಕೀ, ಬೊಂಕೀ ಎಂದು ದೀರ್ಘ ಮೊದಲ ಅಕ್ಷರದಿಂದ ಎರಡನೆಯದಕ್ಕೆ ಸ್ಥಳಾಂತರಗೊಳ್ಳುತ್ತದೆ.

## ಅಪವಾದಗಳು.

**ಇಕಾರಾಂತವಾದರೂ ಸ್ತ್ರೀಲಿಂಗದ ಬದಲು ಪುಲ್ಲಿಂಗವಾಗುವ ಶಬ್ದಗಳು.**

ಅನ್ಯಾಯಿ, ಉಭ್ಯಾಯಿ, ಉಪಾಯಿ, ಕಷಾಯಿ, ಘಾಯಿ, ದರ್ಜಿ, ಮೇಸ್ತ್ರಿ, ಪಂಚಕಜ್ಜಾಯಿ, ಪಾಯಿ ಇತ್ಯಾದಿ.

ಇವು ಬಹುವಚನದಲ್ಲಿ ಬದಲಾಗದೆ ಉಳಿಯುತ್ತವೆ.

ಲೋಣಿ, ಪಾಣಿ ಇಕಾರಾಂತವಾದರೂ ನಪುಂಸಕ ಲಿಂಗ. ಇವು ಮೂಲತಃ ಬಹುವಚನ ಪದಗಳಾಗಿದ್ದು ಅಗತ್ಯವಿದ್ದರೆ ಪಾಣಿ ಪಾಣ್ಯಂ ಎಂದಾಗಬಹುದು. ಉದಾಃ ಭಾಣಾಂತ್ಲ್ಯಂ ಶಳನಿ ಖರ ಪಾಣ್ಯಂ ಟ್ಪತಿ.

**ಆಕಾರಾಂತವಾದರೂ ಸ್ತ್ರೀಲಿಂಗವಾಗದೆ ಪುಲ್ಲಿಂಗವೆನಿಸುವ ಶಬ್ದಗಳು.**

ದಾತಾ, ಭಾವಾ, ದಾದ್ದಾ, ಕಾಕ್ಕಾ, ಮಾಮ್ಮಾ, ಆಣ್ಣಾ, ಕರ್ತಾ - ಇವು ಕೂಡ ಬಹುವಚನದಲ್ಲಿ ಬದಲಾಗುವುದಿಲ್ಲ.

**ಅಕಾರಾಂತವಾದರೂ ನಪುಂಸಕ ಲಿಂಗದ ಬದಲು ಸ್ತ್ರೀಲಿಂಗ ಎನಿಸುವ ಶಬ್ದಗಳು.**

ಭಾಸ, ಕಾಸ, ಧಾರ, ಪೇಜ್ಸ, ಮೇಜ್ಸ, ಭೂಖ, ವಾಟ, ವೇಳ, ನೀದ, ಬೇಶಿಕ, ಹಾಶಿಕ, ಮೂಲಿಕ, ರಿವಾಜ್ಸ, ಲಾತ, ವಂತಿಕ, ಸಾಲ, ಕಽರ, ಊವ, ಲೀಖ, ಛ್ಸೇಪ, ವಾರ (ವ್ಯಾಲೆಲ್ಯಾ ಗಾಯಿ ಮೆಶ್ಶಿಂಚೆ) ಇತ್ಯಾದಿ.

ಇವು ಬಹುವಚನದಲ್ಲಿ ಭಾಸ - ಭಾಸ್ಸೊ, ಕಾಸ - ಕಾಸ್ಸೊ, ಧಾರ - ಧಾರೊ, ಪೇಜ್ಸ - ಪೆಜ್ಸೊ , ಮೇಜ್ಸ - ಮೇಜ್ಸೊ, ಭೂಖ - ಭುಕ್ಖೊ, ವಾಟ -ವಾಟ್ಟೊ, ವೇಳ - ವೇಳೊ, ನೀದ - ನಿದ್ದೊ, ಬೇಶಿಕ - ಬೇಶಿಕೊ, ಹಾಶಿಕ - ಹಾಶಿಕೊ, ಮೂಲಿಕ - ಮೂಲಿಕೊ, ರಿವಾಜ್ಸ- ರಿವಾಜ್ಸೊ, ಲಾತ - ಲಾತ್ತೊ, ವಂತಿಕ - ವಂತಿಕೊ, ಸಾಲ - ಸಾಲೊ, ಕಽರ - ಕಽರೊ, ಊವ - ಊವೊ, ಲೀಖ - ಲಿಕ್ಖೊ, ಛ್ಸೇಪ - ಛ್ಸೆಪ್ಪೊ ಹೀಗೆ ಒಕಾರಾಂತವಾಗಿ ವಿವಿಧ ರೂಪಗಳನ್ನು ಹೊಂದುತ್ತವೆ.

ಇತರ ಭಾಷೆಗಳಿಂದ ಎರವಲು ಪಡೆದ ಕೆಲವು ಪದಗಳು ವಿವಿಧ ಲಿಂಗ ರೂಪದಲ್ಲಿ ಪ್ರಯೋಗವಾಗುವುದೂ ಇದೆ.

ಚಾ - ಸ್ತ್ರೀಲಿಂಗ, ನಪುಂಸಕ ಲಿಂಗ.

ರೇಡಿಯೊ, ಬಲ್ಬ್ , ಟಾರ್ಚ್, ಲೈಟ್ - ಪುಲ್ಲಿಂಗ, ನಪುಂಸಕ ಲಿಂಗ.

**ಪದದ ಲಿಂಗ ತಪ್ಪಾದರೆ ವಾಕ್ಯದಲ್ಲಿರುವ ವಿಶೇಷಣ, ವಿಭಕ್ತಿ ಪ್ರತ್ಯಯ, ಕ್ರಿಯಾಪದ ಎಲ್ಲವೂ ತಪ್ಪಾಗುತ್ತವೆ.**

ಉದಾ:

ಕೇಳಂ ಎಂಬ ನಪುಂಸಕ ಲಿಂಗ.ಪದದ ಒಂದು ವಾಕ್ಯ ನೋಡೋಣ.

ರಾಮಾನ ಕೃಷ್ಣಾಲಾ ಹಳ್ದಿವಂ ದೀಂಘ ಗೋಡ ಕೇಳಂ ದಿಧ್ಲಂನ.

ಕೇಳಂ ಎಂದರೆ ಪುಲ್ಲಿಂಗ ಎಂದು ಗ್ರಹಿಸಿ ರಚಿಸುವ ವಾಕ್ಯ ಹೇಗಿರುತ್ತದೆ ನೋಡೋಣ,

ರಾಮಾನ ಕೃಷ್ಣಾಲಾ ಹಳ್ದಿವೊ ದೀಂಘು ಗೋಡು ಕೇಳಂ ದಿಧ್ಲೋನು! ಇಲ್ಲಿ ಇಡೀ ವಾಕ್ಯವೇ ಅಯೋಮಯ ಆಯಿತು.

# ಚಿತ್ಪಾವನಿಯಲ್ಲಿ ವಿಭಕ್ತಿ ಪ್ರತ್ಯಯಗಳು

ಚಿತ್ಪಾವನಿಯಲ್ಲೂ ಪ್ರಥಮಾ, ದ್ವಿತೀಯಾ, ತೃತೀಯಾ, ಚತುರ್ಥೀ, ಪಂಚಮೀ, ಷಷ್ಠೀ, ಸಪ್ತಮೀ ಮತ್ತು ಸಂಬೋಧನಾ ವಿಭಕ್ತಿಗಳಿವೆ.

| ಚಿತ್ಪಾವನೀ ವಿಭಕ್ತಿ ಪ್ರತ್ಯಯ | | | | |
|---|---|---|---|---|
| | ವಿಭಕ್ತಿ | ಪ್ರತ್ಯಯ | ಪ್ರಭಾವಿತ ಪದ | ಉದಾಹರಣ |
| 1 | ಪ್ರಥಮಾ | ನ, ಯಿಂ | ಕರ್ತೃ (ಭೂತಕಾಲ ಸಕರ್ಮಕ ಮಾತ್ರ) | ರಾಮಾನ, ಚ್ಲೇಡೆಯಿಂ |
| 2 | ದ್ವಿತೀಯಾ | ಲಾ, ಥಾ | ಕರ್ಮ | ಬಾಳಾಲಾ, ಬೋಡ್ಯೆಂಥಾ |
| 3 | ತೃತೀಯಾ | ನ, ಯಿಂ | ಕಿಣ್ಣಾನ ಕ್ರಿಯಾ ಹಳ್ಸೆ ತಂ | ಕೋಯ್ತ್ಯಾನ, ಹಾತ್ತಿಯಿಂ |
| 4 | ಚತುರ್ಥೀ | ಲಾ, ಥಾ | ಫಲಾನುಭವಿ, ಗಮ್ಯ | ಕೃಷ್ಣಾಲಾ ದಿಧ್ಲನ, ಕ್ಷೇತ್ರಾಂಥಾ ಗೆಲ್ಲೊ |
| 5 | ಪಂಚಮೀ | ಠಿಂ, ವೆಲ್ಯಂ(ವರ್ಠಿಂ) | ಮೂಲ, ಕಾರಣಕರ್ತಾ | ವಾಡ್ಯಾಂಠಿಂ, ಸೆಝ್ಪೋಳ್ಯಾಂವೆಲ್ಯಂ |
| 6 | ಷಷ್ಠೀ | ಚ್ಲೊ,ಚ್ಲೆ,ಚಿ,ಚ್ಯೊ,ಚ್ಲಂ,ಚಿಂ | ಸಂಬಂಧ ಸೂಚಕ | ತೇಚ್ಲೊ, ಆಮ್‌ಚ್ಲೆ, ತೆಂಚ್ಲಂ ಇತ್ಯಾದಿ |
| 7 | ಸಪ್ತಮೀ | ತು, ತ್ಲ್ಯಂ | ಸ್ಥಾನ ಸೂಚಕ | ಪಾಣ್ಯಾಂತು, ರಾನ್ನಾಂತ್ಲ್ಯಂ |
| 8 | ಸಂಬೋಧನಾ | ಏ, ಅರೇ, ಅಗೋ | ಧ್ಯಾನಾಕರ್ಷಕ | ಅರೇ ಬೋಡ್ಯಾ, ಅಗೋ ತ್ಲೇಡಿ |

**1.ಪ್ರಥಮಾ ವಿಭಕ್ತಿ:** ಕರ್ತೃರ್ಥ. ಸಕರ್ಮಕ ಭೂತಕಾಲ ವಾಕ್ಯಗಳಲ್ಲಿ ಏಕವಚನಕ್ಕೆ ನ, ಬಹುವಚನಕ್ಕೆ ಯಿಂ ಪ್ರತ್ಯಯ. ವರ್ತಮಾನ, ಭವಿಷ್ಯತ್ ಕಾಲದ ವಾಕ್ಯಗಳಲ್ಲಿ ಕರ್ತೃ ಪದಕ್ಕೆ ಪ್ರತ್ಯಯ ಸೇರಿಕೊಳ್ಳುವುದಿಲ್ಲ.

ಉದಾಃ ರಾಮು (ತೋ) ಲ್ಯಹಂಟ್ಲೆ. ಸೀತಾ ( ತೀ) ವಾಚ್ಚೇರ. ಮೆಂ ಚ್ಲಾಲ್ಲಟ್ಲಂ, ತೂ ಶಾಕ ಧಿಂದಟ್ಲಶಿ.

ಭೂತ ಕಾಲದ ಪ್ರಥಮ ಪುರುಷ ಸಕರ್ಮಕ ವಾಕ್ಯದಲ್ಲಿ ಏಕವಚನ ಕರ್ತೃ ಪದಕ್ಕೆ ನ, ಬಹುವಚನ ಪದಕ್ಕೆ ಯಿಂ ಪ್ರತ್ಯಯ ಸೇರಿಕೊಳ್ಳುತ್ತದೆ.

ಉದಾಃ ರಾಮಾನ(ತೇಳಿನ) ಕಾಮ ಕೆಲ್ಲಂನ. ನ ಪ್ರತ್ಯಯ ರಾಮು(ತೋ) ಎಂಬ ಏಕವಚನ ಕರ್ತೃ ಪದದ ಜೊತೆಗೆ ಕರವೆಚ್ಲಂ ಎಂಬ ಕ್ರಿಯಾಪದದಲ್ಲಿ ಕೆಲ್ಲನ ರೂಪದಲ್ಲಿ ಬಂತು.

ಸೀತಾನ (ತ್ಯಾಳಿನ) ಪೋಳ್ಯೊ ವಾಢ್ಯೆಲ್ಯೋನು. ಇಲ್ಲಿ ನ ಪ್ರತ್ಯಯ ಕರ್ತೃಪದ ಸೀತಾ ಜೊತೆಗೆ (ಅಥವಾ ತ್ಯಾ ಜೊತೆಗೆ) ಹಾಗೂ ನು ಪ್ರತ್ಯಯ ವಾಢ್ಡವೆತ್ಸಂ ಎಂಬ ಕ್ರಿಯಾಪದದ ಜೊತೆಗೆ ವಾಢ್ಯೆಲ್ಯೋನು ರೂಪದಲ್ಲಿ ಬಂತು.

ಚ್ಸೇಡೆಯಿಂ (ತೇಯಿಂ) ಕಾಮ ಕೆಲ್ಲಿಂ. ಯಿಂ ಪ್ರತ್ಯಯ ಚ್ಸೇಡೆ (ತೇ) ಎಂಬ ಬಹುವಚನ ಕರ್ತೃ ಪದದ ಜೊತೆಗೆ ಬಂತು. ಕರವೆಚ್ಸಂ ಎಂಬ ಕ್ರಿಯಾಪದದಲ್ಲೂ ಕೆಲ್ಲಿಂ ರೂಪದಲ್ಲಿ ಬಂತು.

**ಭೂತಕಾಲದ ಅಕರ್ಮಕ ವಾಕ್ಯದಲ್ಲಿ ಪ್ರತ್ಯಯ ಇಲ್ಲ.**

ಉದಾಃ ರಾಮು ಗೆಲ್ಲೊ. ಸೀತಾ ರಡ್ಳಿ.

**ಪ್ರಥಮಾ ವಿಭಕ್ತಿಯಲ್ಲಿ ಇನ್ನಷ್ಟು ಸೂಕ್ಷ್ಮಗಳಿವೆ.**

ನ ಪ್ರತ್ಯಯ ಇಲ್ಲದ ಸಂದರ್ಭದಲ್ಲಿ ಎಲ್ಲ ಅಕಾರಾಂತ ಪುಲ್ಲಿಂಗ ಹೆಸರುಗಳು ಉಕಾರಾಂತ ಆಗುತ್ತವೆ.

ಉದಾಃ ರಾಮ : ರಾಮು, ರಮೇಶ : ರಮೇಶು ಇತ್ಯಾದಿ.

ಆದರೆ ಹೆಸರು ಚಿತ್ಪಾವನೇತರರದ್ದು ಆಗಿದ್ದರೆ ಉಕಾರದ ಬದಲಿಗೆ ಓಕಾರಾಂತ ಆಗುತ್ತದೆ.

ಉದಾಃ ರಾಮೋ, ರಮೇಶೋ ಇತ್ಯಾದಿ.

ಹೆಸರಿನಲ್ಲಿ ಎರಡಕ್ಕಿಂತ ಹೆಚ್ಚು ಅಕ್ಷರಗಳಿದ್ದು ಕೊನೆಯ ಅಕ್ಷರಕ್ಕಿಂತ ಹಿಂದಿನದು ಅಕಾರ ಅಕ್ಷರ ಆಗಿದ್ದರೆ ಅದು ಓಕಾರ ಆಗುತ್ತದೆ.

ಉದಾಃ ಕೇಶವ : ಕೇಶೋವು, ಪ್ರಭಾಕರ : ಪ್ರಭಾಕೋರು, ಪುರುಷೋತ್ತಮ : ಪುರುಷೋತ್ತೋಮು ಇತ್ಯಾದಿ.

ನ ಪ್ರತ್ಯಯ ಬರುವ ಸಂದರ್ಭದಲ್ಲಿ ಅಕಾರಾಂತ ಇದ್ದದ್ದು ಆಕಾರಾಂತ ಆಗುತ್ತದೆ.

ಉದಾಃ ಗೋವಿಂದ - ಗೋವಿಂದಾನ, ನಾರಾಯಣ : ನಾರಾಯಣಾನ ಇತ್ಯಾದಿ.

ಚಿತ್ಪಾವನೇತರರಿಗೆ ಓಕಾರಾಂತ ಇದ್ದದ್ದು ಏಕಾರಾಂತ ಆಗುತ್ತದೆ.

ಉದಾ : ಗೋವಿಂದೋ - ಗೋವಿಂದೇನ, ರಮೇಶೋ - ರಮೇಶೇನ.

**2. ದ್ವಿತೀಯಾ ವಿಭಕ್ತಿ:** ಕರ್ಮಾರ್ಥ. ಏಕವಚನ : ಲಾ, ಬಹುವಚನ : ಥಾ ಪ್ರತ್ಯಯ.

ಉದಾಃ ಸೀತಾ ಬಾಳಾಲಾ ಆಂದುಳ್ಸೆ. ಬಾಳ ಎಂಬ ಏಕವಚನ ಕರ್ಮ ಪದಕ್ಕೆ ಲಾ ಪ್ರತ್ಯಯ ಸೇರಿಕೊಂಡಿತು.

ರಾಮು ಬೋಡ್ಯೆಂಥಾ ಗಾಳಾಯ್ಸೆ. ಬೋಡ್ಯೆ ಎಂಬ ಬಹುವಚನ ಕರ್ಮ ಪದಕ್ಕೆ ಥಾ ಪ್ರತ್ಯಯ ಬಂತು.

ಆದರೆ ಪ್ರತ್ಯಯ ಇಲ್ಲದ ದ್ವಿತೀಯಾ ವಿಭಕ್ತಿ ಪ್ರಯೋಗಗಳೂ ಇವೆ.

ಉದಾಃ ರಾಮಾನ ಆಂಬೊ ಖಾವ್ನಿ ಪೊಪ್ಪಳಂ ಕೋಳ್ಳಿಂನ. ಇಲ್ಲಿ ಆಂಬೊ / ಪೊಪ್ಪಳಂ ಕರ್ಮ ಪದಗಳಾದರೂ ಆಂಬೆಲಾ / ಪೊಪ್ಪಳಾಂಥಾ ಎಂದು ಲಾ /ಥಾ ಪ್ರತ್ಯಯ ಸೇರಿಕೊಳ್ಳಲಿಲ್ಲ.

ಇಲ್ಲಿ ಇನ್ನೊಂದು ಸೂಕ್ಷ್ಮ ಇದೆ. ಕೆಲವು ಸಂದರ್ಭಗಳಲ್ಲಿ ನಿರ್ದಿಷ್ಟತೆ ಇದ್ದರೆ ಲಾ ಪ್ರತ್ಯಯ ಇರುತ್ತದೆ. ಇಲ್ಲದಿದ್ದರೆ ಇಲ್ಲ.

ಗೋಶಾಳಾಂಠಿಂ ಗಾಯಿ(ಯಾವುದಾದರೂ) ಹಾಡ್ಳಿನ.

ದೊಡ್ಯಾಂಠಿಂ ಗಾಯಿಲಾ(ನಿರ್ದಿಷ್ಟ - ಅವನದ್ದೇ) ಹಾಡ್ಳಿನ.

ಬೋಡ್ಯೇಲಾ ರತ್ನಾಗಿರ್ಯಾಂಠಿಂ ತ್ಸೇಡಿ ಹಾಡ್ಳಿನ.

ಆಜ್ಜೋಳಾ ಗೆಲ್ಲೆಲ್ಯಾ ತ್ಸೇಡಿಲಾ ಹಾಡ್ಳಿನ.

**3. ತೃತೀಯಾ ವಿಭಕ್ತಿ:** ಕರಣಾರ್ಥ/ಸಾಧನಾರ್ಥ. ಯಾವುದರಿಂದ ಕ್ರಿಯೆ ಮಾಡಲ್ಪಡುತ್ತದೋ ಆ ಪದಕ್ಕೆ ಏಕವಚನ : ನ, ಬಹುವಚನ : ಯಿಂ ಪ್ರತ್ಯಯ.

ಉದಾ: ರಾಮು ಕೋಯ್ತ್ಯಾನ ಖಾಂಡಿಳ್ಸೆ. ಇಲ್ಲಿ ಕೋಯ್ತಿ ಎಂಬ ಸಾಧನಾರ್ಥ ಏಕವಚನ ಶಬ್ದಕ್ಕೆ ನ ಪ್ರತ್ಯಯ ಬಂತು.
ಸೀತಾ(ತೀ) ಹಾತ್ಥಿಯಿಂ ಕಾಮ ಕರ್ಳ್ಸೆ. ಹಾಥ ಎಂಬ ಬಹುವಚನ ಶಬ್ದಕ್ಕೆ ಯಿಂ ಪ್ರತ್ಯಯ ಬಂತು.

**4. ಚತುರ್ಥೀ ವಿಭಕ್ತಿ:** ಸಂಪ್ರದಾನ - ಫಲಾನುಭವಿ, ಕ್ರಿಯೆಯ ಪರಿಣಾಮ ಅನುಭವಿಸುವ ವ್ಯಕ್ತಿ /ಗಮ್ಯ ಸ್ಥಾನ.
ಏಕವಚನ : ಲಾ, ಬಹುವಚನ : ಧಾ ಪ್ರತ್ಯಯ.
ಸೀತಾನ(ತ್ಯಾಳಿನ) ಬಾಳಾಲಾ ಖೇಳಣ ದಿಧ್ಲಂನ. ಬಾಳ ಎಂಬ ಫಲಾನುಭವಿ ಏಕವಚನ ಪದಕ್ಕೆ ಲಾ ಪ್ರತ್ಯಯ ಬಂತು.
ರಾಮಾನ(ತೇಳಿನ) ಧಾಕ್ಕುಟೆಂಧಾ ಮಿಠಾಯಿ ವಾಂಟ್ಯೆಲಿನ. ಧಾಕ್ಕುಟಿಂ ಎಂಬ ಫಲಾನುಭವಿ ಬಹುವಚನ ಪದಕ್ಕೆ ಧಾ ಪ್ರತ್ಯಯ ಬಂತು.
ಕೃಷ್ಣ(ತೋ) ಪೆಂಠಾಲಾ ಗೆಲ್ಲೊ. ಪೇಂಠ ಎಂಬ ಏಕವಚನ ಗಮ್ಯ ಪದಕ್ಕೆ ಲಾ ಪ್ರತ್ಯಯ ಬಂತು.
ಗೋವಿಂದು(ತೋ) ತೀರ್ಥಕ್ಷೇತ್ರಾಂಧಾ ಗೆಲ್ಲೊ. ತೀರ್ಥಕ್ಷೇತ್ರಂ ಎಂಬ ಬಹುವಚನ ಗಮ್ಯ ಪದಕ್ಕೆ ಧಾ ಪ್ರತ್ಯಯ ಬಂತು.

ಅಕರ್ಮಕ ಏಕವಚನ ವಾಕ್ಯಗಳಲ್ಲಿ ಲಾ ರಹಿತ ಆ ಪ್ರತ್ಯಯ ಪ್ರಯೋಗವೂ ಇದೆ.
ಉದಾ: ಕಾರ್ಕಳಾ ಗೆಲ್ಲೊ / ಕಾರ್ಕಳಾಲಾ ಗೆಲ್ಲೊ - ಈ ಎರಡು ರೂಪಗಳೂ ಸ್ವೀಕಾರಾರ್ಹ.

**5. ಪಂಚಮೀ ವಿಭಕ್ತಿ:** ಅಪಾದಾನ, ಕಾರಣಕರ್ತಾ, ಪ್ರೇರಣಾ. ಮೂಲ ತಿಳಿಸುವ ಶಬ್ದಕ್ಕೆ ಥಿಂ / ವೆಲ್ಯಂ(ವರ್ಥಿಂ) ಪ್ರತ್ಯಯ.
ಕಾಮ್ಮಾಚೆಂ(ತೀಂ) ವಾಡ್ಯಾಂಥಿಂ ಆಯ್ಲಿಂ. ವಾಡಿ ಎಂಬ ಶಬ್ದಕ್ಕೆ ಥಿಂ ಪ್ರತ್ಯಯ ಬಂತು.
ವಠಾರ್‌ಕಾರಾಂವೆಲ್ಯಂ(ವರ್ಥಿಂ) ಕಾಮ ಸೊಹೋಪಾಯಾ ಜ್ಞಾಲಂ. ವಠಾರ್‌ಕಾರ ಎಂಬ ಕಾರಣಕರ್ತ ಶಬ್ದಕ್ಕೆ ವೆಲ್ಯಂ(ವರ್ಥಿಂ) ಪ್ರತ್ಯಯ ಬಂತು.

**6. ಷಷ್ಠೀ ವಿಭಕ್ತಿ:** ಸಂಬಂಧ ಸೂಚಕ. ಚ್ಯೊ, ಚ್ಯೆ, ಚೆ, ಚ್ಯೊ, ಚ್ಯಾ, ಚ್ಯಂ, ಚೆಂ ಪ್ರತ್ಯಯ.
ರಾಮಾಚ್ಯೊ ಬೋಡ್ಯೊ, ಮಾಡ್ಡಾಚ್ಯೆ ಕೊತ್ತಾಳ್ಗೆ, ಕೃಷ್ಣಾಚೆ ವಾಡಿ, ಗೋವಿಂದಾಚ್ಯೊ ತ್ಸೇಡಿ, ಗೋಪಾಳಾಚ್ಯಾ ವಾಡ್ಯಾಂತು, ರಮೇಶಾಚ್ಯಂ ಪುಸ್ತಕ, ಮಾಜ್ಸೆರಾಚೆಂ ಪೋರಂ.

## ಷಷ್ಠೀ ವಿಭಕ್ತಿ ಪ್ರಯೋಗಲ್ಲಿ ಅನೇಕರು ತಪ್ಪು ಮಾಡುತ್ತಾರೆ.

ಲಿಂಗ, ವಚನ, ಪುರುಷಾನುಸಾರ ಷಷ್ಠೀ ವಿಭಕ್ತಿಯ ರೂಪಗಳು ಹೇಗಿರಬೇಕು ಎಂಬುದನ್ನು **ತಖ್ತೆ 1**ರಲ್ಲಿ ನೋಡಬಹುದು. ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕ ಲಿಂಗಗಳಿಗೆ ಕ್ರಮವಾಗಿ ಡೊಗ್ಗೋರು, ವಾಡಿ, ಆಂಗಣಂ ಪದಗಳನ್ನು ಉದಾಹರಣೆಯಾಗಿ ಬಳಸಲಾಗಿದೆ.

## ತಖ್ತೆ 1

| ಲಿಂಗ, ವಚನ, ಪುರುಷಾನುಸಾರ ಷಷ್ಠೀ ವಿಭಕ್ತಿ ರೂಪ | | | | | | | |
|---|---|---|---|---|---|---|---|
| | | ಉತ್ತಮ ಪುರುಷ | | ಮಧ್ಯಮ ಪುರುಷ | | ಪ್ರಥಮ ಪುರುಷ | |
| | | ಏಕ ವಚನ | ಬಹು ವಚನ | ಏಕ ವಚನ | ಬಹು ವಚನ | ಏಕ ವಚನ | ಬಹು ವಚನ |
| ಪುಲ್ಲಿಂಗ (ಡೊಗ್ಗೊರು) | ಏಕ ವಚನ | ಮಾಜ್ಜ್ಸೆ ಡೊಗ್ಗರಾವರಿ | ಆಮ್ಚ್ಸೆ ಡೊಗ್ಗರಾವರಿ | ತುಜ್ಜ್ಸೆ ಡೊಗ್ಗರಾವರಿ | ತುಮ್ಚ್ಸೆ ಡೊಗ್ಗರಾವರಿ | ತೇಚ್ಸೆ/ತ್ಯಾಚ್ಸೆ ಡೊಗ್ಗರಾವರಿ | ತೆಂಚ್ಸೆ/ತ್ಯಾಂಚ್ಸೆ ಡೊಗ್ಗರಾವರಿ |
| | ಬಹು ವಚನ | ಮಾಜ್ಜ್ಸೆ ಡೊಗ್ಗರಾಂವರಿ | ಆಮ್ಚ್ಸೆ ಡೊಗ್ಗರಾಂವರಿ | ತುಜ್ಜ್ಸೆ ಡೊಗ್ಗರಾಂವರಿ | ತುಮ್ಚ್ಸೆ ಡೊಗ್ಗರಾಂವರಿ | ತೇಚ್ಸೆ/ತ್ಯಾಚ್ಸೆ ಡೊಗ್ಗರಾಂವರಿ | ತೆಂಚ್ಸೆ/ತ್ಯಾಂಚ್ಸೆ ಡೊಗ್ಗರಾಂವರಿ |
| ಸ್ತ್ರೀಲಿಂಗ (ವಾಡಿ) | ಏಕ ವಚನ | ಮಾಜ್ಜ್ಯಾ ವಾಡ್ಯಾಂತು | ಆಮ್ಚ್ಯಾ ವಾಡ್ಯಾಂತು | ತುಜ್ಜ್ಯಾ ವಾಡ್ಯಾಂತು | ತುಮ್ಚ್ಯಾ ವಾಡ್ಯಾಂತು | ತೇಚ್ಯಾ/ತ್ಯಾಚ್ಯಾ ವಾಡ್ಯಾಂತು | ತೆಂಚ್ಯಾ/ತ್ಯಾಂಚ್ಯಾ ವಾಡ್ಯಾಂತು |
| | ಬಹು ವಚನ | ಮಾಜ್ಜ್ಯಾ ವಾಡ್ಯಾಂತ್ಲ್ಯಂ | ಆಮ್ಚ್ಯಾ ವಾಡ್ಯಾಂತ್ಲ್ಯಂ | ತುಜ್ಜ್ಯಾ ವಾಡ್ಯಾಂತ್ಲ್ಯಂ | ತುಮ್ಚ್ಯಾ ವಾಡ್ಯಾಂತ್ಲ್ಯಂ | ತೇಚ್ಯಾ/ತ್ಯಾಚ್ಯಾ ವಾಡ್ಯಾಂತ್ಲ್ಯಂ | ತೆಂಚ್ಯಾ/ತ್ಯಾಂಚ್ಯಾ ವಾಡ್ಯಾಂತ್ಲ್ಯಂ |
| ನಪುಂಸಕ ಲಿಂಗ (ಆಂಗಣಂ) | ಏಕ ವಚನ | ಮಾಜ್ಜ್ಸೆ ಆಂಗಣೆಂತು | ಆಮ್ಚ್ಸೆ ಆಂಗಣೆಂತು | ತುಜ್ಜ್ಸೆ ಆಂಗಣೆಂತು | ತುಮ್ಚ್ಸೆ ಆಂಗಣೆಂತು | ತೇಚ್ಸೆ/ತ್ಯಾಚ್ಸೆ ಆಂಗಣೆಂತು | ತೆಂಚ್ಸೆ/ತ್ಯಾಂಚ್ಸೆ ಆಂಗಣೆಂತು |
| | ಬಹು ವಚನ | ಮಾಜ್ಜ್ಸೆ ಆಂಗಣೆಂತ್ಲ್ಯಂ | ಆಮ್ಚ್ಸೆ ಆಂಗಣೆಂತ್ಲ್ಯಂ | ತುಜ್ಜ್ಸೆ ಆಂಗಣೆಂತ್ಲ್ಯಂ | ತುಮ್ಚ್ಸೆ ಆಂಗಣೆಂತ್ಲ್ಯಂ | ತೇಚ್ಸೆ/ತ್ಯಾಚ್ಸೆ ಆಂಗಣೆಂತ್ಲ್ಯಂ | ತೆಂಚ್ಸೆ/ತ್ಯಾಂಚ್ಸೆ ಆಂಗಣೆಂತ್ಲ್ಯಂ |

**7. ಸಪ್ತಮೀ ವಿಭಕ್ತಿ:** ಅಧಿಕರಣ, ಛ್ಸವೆಚ್ಸಂ ಸ್ಥಾನ. ತು, ತ್ಲ್ಯಂ ಪ್ರತ್ಯಯ.

ಪಾಣ್ಯಾಂತು ಮಾಂಛ್ಸೆ ಛ್ಸತಿ, ರಾನ್ನಾತ್ಲ್ಯಂ ವಾಘ ಭೋವಛ್ಸತಿ.

**8. ಸಂಬೋಧನ ವಿಭಕ್ತಿ:** ಏ, ಅರೇ. ಅಗೋ.

ಏ ಕೃಷ್ಣಾ, ಹೆಗ್ಡಾ ಯೇ. ಅರೇ ಬೋಡ್ಯಾ, ಅಸಂ ಕರುಂ ನಾಕಾಂ. ಅಗೋ ಚ್ಸೇಡಿ, ಲೊಕ್ಕರಿ ಸೊಕ್ಕಿಂ ಕರಿ.

ಏ, ಅರೇ, ಅಗೋ ವಿನಃ ಹೆಸರು ಹೇಳಿ ಸಂಬೋಧಿಸುವಾಗ ಅಕಾರಾಂತ ಪುಲ್ಲಿಂಗ ಹೆಸರು ಆಕಾರಾಂತ ಆಗುತ್ತದೆ.

ಉದಾ: ಪದ್ಮನಾಭಾ, ಗೋವಿಂದಾ ಇತ್ಯಾದಿ.

ಬಹುತೇಕ ಸ್ತ್ರೀಲಿಂಗ ಹೆಸರುಗಳು ಆಕಾರಾಂತವಾಗಿಯೇ ಇರುವುದರಿಂದ ಅವು ಹಾಗೆಯೇ ಉಳಿಯುತ್ತವೆ.

ಕೆಲವೊಮ್ಮೆ ಸಂಬೋಧಿತ ಹೆಸರುಗಳಿಗೆ ಏ ವಿಶ್ವ್ಯಾ, ಲಕ್ಷ್ಮಿಮ್ಯೇ ರೀತಿಯ ಪ್ರತ್ಯಯಗಳು ಸೇರಿಕೊಳ್ಳುವುದುಂಟು.

ಆಯ್ಕ್ಯೆ ಲಂಶಿಕಾ, ಹ್ಯೆಕಾ ಹೋ, ಎಠಾ ಆಯ್ಕುವೆತ್ಸಂಕಾ (ಗಂಡನಿಗೆ!) ಇತ್ಯಾದಿ ಸಂಬೋಧನಾ ವಿಭಕ್ತಿ ಪ್ರತ್ಯಯಗಳೂ ಇವೆ.

# ಅಕರ್ಮಕ, ಸಕರ್ಮಕ ಮತ್ತು ನ, ಯಿಂ ಪ್ರತ್ಯಯಗಳು

ಕ್ರಿಯಾಪದಕ್ಕೆ ಕಸಲಂ(ಏನನ್ನು) ಎಂದು ಪ್ರಶ್ನೆ ಹಾಕಿದಾಗ ಉತ್ತರ ಸಿಕ್ಕಿದರೆ ಅದು ಸಕರ್ಮಕ ವಾಕ್ಯ. ಇಲ್ಲವಾದರೆ ಅಕರ್ಮಕ. ಹಿಂದಿಯ ನೆ ಮತ್ತು ಮರಾಠಿಯ ನಿ ಪ್ರತ್ಯಯದಂತೆ ಚಿತ್ಪಾವನಿಯಲ್ಲಿ ನ ಪ್ರತ್ಯಯದ ಬಳಕೆ ಇದೆ. ಹಿಂದಿಯಲ್ಲಿ ಉತ್ತಮ, ಮಧ್ಯಮ ಮತ್ತು ಪ್ರಥಮ ಮೂರೂ ಪುರುಷಗಳಲ್ಲಿ ನೆ ಪ್ರತ್ಯಯ ಬಳಕೆಯಾಗುತ್ತದೆ. ಆದರೆ ಮರಾಠಿ ಮತ್ತು ಚಿತ್ಪಾವನಿಯಲ್ಲಿ ಉತ್ತಮ ಮತ್ತು ಮಧ್ಯಮ ಪುರುಷ ಸಂದರ್ಭದಲ್ಲಿ ನ ಪ್ರತ್ಯಯದ ಬಳಕೆ ಇಲ್ಲ.  ಮೂರೂ ಲಿಂಗಗಳ ಪ್ರಥಮ ಪುರುಷ ಏಕವಚನ (ತೋ, ತೀ, ತಂ), ಭೂತಕಾಲದ ಸಕರ್ಮಕ ವಾಕ್ಯಗಳಲ್ಲಿ ಮಾತ್ರ ಕರ್ತೃ ಮತ್ತು ಕ್ರಿಯಾಪದಗಳ ಕೊನೆಗೆ ಇದು ಸೇರಿಕೊಳ್ಳುತ್ತದೆ. ಪ್ರಥಮ ಪುರುಷ ಬಹುವಚನ (ತೇ, ತ್ಯೋ, ತೀಂ) ವಾಕ್ಯಗಳಲ್ಲಿ ನ ಇದ್ದದ್ದು ಯಿಂ ಆಗುತ್ತದೆ.

**ಅಕರ್ಮಕ ವಾಕ್ಯಗಳು.** ಉದಾಃ ರಾಮು ಗೆಲ್ಲೊ.
ಇಲ್ಲಿ ಗೆಲ್ಲೊ ಎಂಬ ಕ್ರಿಯಾಪದಕ್ಕೆ ಕಸಲಂ ಗೆಲ್ಲೊ ಎಂದು ಪ್ರಶ್ನೆ ಹಾಕಿದರೆ ಉತ್ತರ ಸಿಗದು. ಹೀಗಾಗಿ ಇದು ಸಕರ್ಮಕ ಅಲ್ಲ, ಅಕರ್ಮಕ.
ಅಕರ್ಮಕ ವಾಕ್ಯಗಳಲ್ಲಿ ಯಾವಾಗಲೂ ಕರ್ತೃಪದಕ್ಕೆ ಅನುಸಾರವಾಗಿ ಕ್ರಿಯಾಪದ ಬದಲಾಗುತ್ತದೆ.
ರಾಮು ಗೆಲ್ಲೊ. ಸೀತಾ ಗೆಲ್ಲಿ. ಮಾಂಕಡ ಗೆಲ್ಲಂ.

ವಿವಿಧ ಲಿಂಗ, ಪುರುಷ , ಕಾಲ ಮತ್ತು ವಚನಗಳಲ್ಲಿ ಅಕರ್ಮಕ ವಾಕ್ಯಗಳನ್ನು **ತಖ್ತೆ 2ರಲ್ಲಿ** ನೋಡಬಹುದು.

# ತಖ್ತೆ 2

| ಅಕರ್ಮಕ ಕಾಲ ಲಿಂಗ ವಚನ ಉದಾಹರಣೆ | | | | | | | |
|---|---|---|---|---|---|---|---|
| | | ಉತ್ತಮ ಪುರುಷ | | ಮಧ್ಯಮ ಪುರುಷ | | ಪ್ರಥಮ ಪುರುಷ | |
| | | ಏಕ ವಚನ | ಬಹು ವಚನ | ಏಕ ವಚನ | ಬಹು ವಚನ | ಏಕ ವಚನ | ಬಹು ವಚನ |
| ಪುಲ್ಲಿಂಗ | ಭೂತ ಕಾಳು | ಮೆಂ ಗೆಲ್ಲೊಂ/ಜ್ಞಾಳ್ಸಲೊಂ | ಆಮ್ಹಿ ಗೆಲ್ಲೊಂ/ಜ್ಞಾಳ್ಸಲೊಂ | ತೂ ಗೆಲ್ಲೊಶಿ/ಜ್ಞಾಳ್ಸಲೊಶಿ | ತುಮ್ಹಿ ಗೆಲ್ಲಿಂಥ/ಜ್ಞಾಳ್ಸಲಿಂಥ | ತೋ ಗೆಲ್ಲೊ/ಜ್ಞಾಳ್ಸಲೊ | ತೇ ಗೆಲ್ಲೆ/ಜ್ಞಾಳ್ಸಲೆ |
| | ವರ್ತಮಾನ ಕಾಳು | ಮೆಂ ಜ್ಞಾಂತು ಳ್ಸಂ | ಆಮ್ಹಿ ಜ್ಞಾಂತ ಳ್ಸೊಂ | ತೂ ಜ್ಞಾಂತು ಳ್ಸಶಿ | ತುಮ್ಹಿ ಜ್ಞಾಂತ ಳ್ಸಾ | ತೋ ಜ್ಞಾಂತು ಳ್ಸೆ | ತೇ ಜ್ಞಾಂತ ಳ್ಸತಿ |
| | ಭವಿಷ್ಯತ್ ಕಾಳು | ಮೆಂ ಜ್ಞಾ ಳ್ಸಂ | ಆಮ್ಹಿ ಜ್ಞಾಳ್ಸೊಂ | ತೂ ಜ್ಞಾಳ್ಸಶಿ | ತುಮ್ಹಿ ಜ್ಞಾಳ್ಸಾ | ತೋ ಜ್ಞಾಳ್ಸೆ | ತೇ ಜ್ಞಾಳ್ಸತಿ |
| ಸ್ತ್ರೀಲಿಂಗ | ಭೂತ ಕಾಳು | ಮೆಂ ಗೆಲ್ಯಂ/ಜ್ಞಾಳ್ಸಲ್ಯಂ | ಆಮ್ಹಿ ಗೆಲ್ಯೊಂ/ಜ್ಞಾಳ್ಸಲ್ಯೊಂ | ತೂ ಗೆಲ್ಲಿಶಿ/ಜ್ಞಾಳ್ಸಲಿಶಿ | ತುಮ್ಹಿ ಗೆಲ್ಯೊಥ/ಜ್ಞಾಳ್ಸಲ್ಯೊಥ | ತೀ ಗೆಲ್ಲಿ/ಜ್ಞಾಳ್ಸಲಿ | ತ್ಯೋ ಗೆಲ್ಯೊ/ಜ್ಞಾಳ್ಸಲ್ಯೊ |
| | ವರ್ತಮಾನ ಕಾಳು | ಮೆಂ ಜ್ಞಾಂತಿ ಳ್ಸಂ | ಆಮ್ಹಿ ಜ್ಞಾಂತಿ ಳ್ಸೊಂ | ತೂ ಜ್ಞಾಂತಿ ಳ್ಸಶಿ | ತುಮ್ಹಿ ಜ್ಞಾಂತಿ ಳ್ಸಾ | ತೀ ಜ್ಞಾಂತಿ ಳ್ಸೆ | ತ್ಯೋ ಜ್ಞಾಂತಿ ಳ್ಸತಿ |
| | ಭವಿಷ್ಯತ್ ಕಾಳು | ಮೆಂ ಜ್ಞಾಳ್ಸಂ | ಆಮ್ಹಿ ಜ್ಞಾಳ್ಸೊಂ | ತೂ ಜ್ಞಾಳ್ಸಶಿ | ತುಮ್ಹಿ ಜ್ಞಾಳ್ಸಾ | ತೀ ಜ್ಞಾಳ್ಸೆ | ತ್ಯೋ ಜ್ಞಾಳ್ಸತಿ |
| ನಪುಂಸಕ ಲಿಂಗ | ಭೂತ ಕಾಳು | | | | | ತಂ ಗೆಲ್ಲಂ/ಜ್ಞಾಳ್ಸಲಂ | ತೀಂ ಗೆಲ್ಲಿಂ/ಜ್ಞಾಳ್ಸಲಿಂ |
| | ವರ್ತಮಾನ ಕಾಳು | | | | | ತಂ ಜ್ಞಾಂತ ಳ್ಸೆ | ತೀಂ ಜ್ಞಾಂತಂ ಳ್ಸತಿ |
| | ಭವಿಷ್ಯತ್ ಕಾಳು | | | | | ತಂ ಜ್ಞಾಳ್ಸೆ | ತೀಂ ಜ್ಞಾಳ್ಸತಿ |

## ಸಕರ್ಮಕ ವಾಕ್ಯಗಳು.

ಈಗ ರಾಮಾನ ಖಾಧ್ಲನ ಎಂಬ ವಾಕ್ಯ ನೋಡೋಣ.

ಇಲ್ಲಿ ಕಸಲಂ ಖಾಧ್ಲನ ಎಂಬ ಪ್ರಶ್ನೆಗೆ ಅರ್ಥಪೂರ್ಣ ಉತ್ತರ ಸಿಗಬಹುದು. ಹೀಗಾಗಿ ಇದು ಸಕರ್ಮಕ.

ಸಕರ್ಮಕ ಆದ್ದರಿಂದ ರಾಮು ಎಂಬ ಕರ್ತೃಪದ ನ ಪ್ರತ್ಯಯ ಸೇರಿಸಿಕೊಂಡು ರಾಮಾನ ಎಂದು ಬದಲಾಯಿತು, ಕ್ರಿಯಾಪದಕ್ಕೂ ನ ಸೇರಿಕೊಂಡು ಖಾಧ್ಲನ ಆಯಿತು.

ಕರ್ಮಪದವನ್ನೂ ಸೇರಿಸಿ ಇದೇ ವಾಕ್ಯವನ್ನು ವಿಸ್ತರಿಸಿದಾಗ ಕರ್ಮಪದದ ಲಿಂಗಕ್ಕೆ ಅನುಸಾರವಾಗಿ ಕ್ರಿಯಾಪದದಲ್ಲಿ ಹೇಗೆ ಬದಲಾವಣೆ ಆಗುತ್ತದೆ ಎಂದು ನೋಡೋಣ.

ರಾಮಾನ ಕೇಳಂ(ನಪುಂಸಕ ಲಿಂಗ) ಖಾಧ್ಲನ.

ರಾಮಾನ ಖೀರಿ(ಸ್ತ್ರೀ ಲಿಂಗ) ಖಾಧ್ಲಿನ.

ರಾಮಾನ ಪಾಪ್ಪೊಡು(ಪುಲ್ಲಿಂಗ) ಖಾಧ್ಲೊನು.

ಇಲ್ಲಿ ಕ್ರಿಯಾಪದಕ್ಕೆ ಸೇರಿದ ನ ಪ್ರತ್ಯಯ ನು ಎಂದು ಬದಲಾದುದನ್ನು ಗಮನಿಸಬಹುದು.

ಈಗ ಕರ್ತೃಪದವನ್ನು ಸ್ತ್ರೀಲಿಂಗ ಮತ್ತು ನಪುಂಸಕ ಲಿಂಗಕ್ಕೆ ಬದಲಾಯಿಸಿದರೆ ಏನಾಗುತ್ತದೆ ಎಂದು ನೋಡೋಣ.

ಸೀತಾನ ಕೇಳಂ(ನಪುಂಸಕ ಲಿಂಗ) ಖಾಧ್ಲನ.

ಸೀತಾನ ಖೀರಿ(ಸ್ತ್ರೀ ಲಿಂಗ) ಖಾಧ್ಲಿನ.

ಸೀತಾನ ಪಾಪ್ಪೊಡು(ಪುಲ್ಲಿಂಗ) ಖಾಧ್ಲೊನು.

ಮಾಂಕಡಾನ ಕೇಳಂ(ನಪುಂಸಕ ಲಿಂಗ) ಖಾಧ್ಲನ.

ಮಾಂಕಡಾನ ಖೀರಿ(ಸ್ತ್ರೀ ಲಿಂಗ) ಖಾಧ್ಲಿನ.

ಮಾಂಕಡಾನ ಪಾಪ್ಪೊಡು(ಪುಲ್ಲಿಂಗ) ಖಾಧ್ಲೊನು.

ಸಕರ್ಮಕ ವಾಕ್ಯಗಳಲ್ಲಿ ಕರ್ತೃಪದದ ಲಿಂಗ ಯಾವುದೇ ಆಗಿದ್ದರೂ ಕ್ರಿಯಾಪದದ ರೂಪ ಕರ್ಮಪದದ ಅನುಸಾರವಾಗಿಯೇ ಇರುವುದು ಈ ಉದಾಹರಣೆಗಳಿಂದ ತಿಳಿಯುತ್ತದೆ.

ಕರ್ತೃಪದ ಬಹುವಚನದಲ್ಲಿದ್ದರೆ ನ ಪ್ರತ್ಯಯ ಯಿಂ ಎಂದು ಬದಲಾಗುತ್ತದೆ ಮತ್ತು ಕ್ರಿಯಾಪದಕ್ಕೆ ಇಂ ಸೇರಿಕೊಳ್ಳುತ್ತದೆ.

ಬೋಡ್ಯೆಯಿಂ ಕೇಳಿಂ ಖಾಧ್ಲಿಂ.

ಬಾಯ್ಲ್ಯಾಕಾಯಿಂ ಕೇಳಿಂ ಖಾಧ್ಲಿಂ.

ಮಾಂಕಡಾಯಿಂ ಕೇಳಿಂ ಖಾಧ್ಲಿಂ.

ಕರ್ಮಪದಕ್ಕೆ ವಿಶೇಷಣ ಇದ್ದರೆ ಅದೂ ಕರ್ಮಪದದ ಲಿಂಗ ಮತ್ತು ವಚನ ಹೊಂದಿಕೊಂಡು ಬದಲಾಗುತ್ತದೆ.

ಬೋಡ್ಯೇನ ಹಳ್ದಿವಂ ಕೇಳಂ ಖಾಧ್ಲಂನ.

ಬೋಡ್ಯೇನ ಹಳ್ದಿವಿಂ ಕೇಳಿಂ ಖಾಧ್ಲಿಂನ.

ತೇಳಿನ ಪಾಣ್ಯಾಚ್ಯೊ ನಾರ್ಯೋಳು ಭ್ಯೊಸ್ಲ್ಯೆಲೊನು.

ತೇಳಿನ ಪಾಣ್ಯಾಚ್ಚೆ ನಾರ್ಯಳ ಭ್ಯೊಸ್ಲ್ಯೆಲೆನ.

ತ್ಯಾಳಿನ ಒಲ್ಲಂ ಚಿರ್ಕುಟ ಪೀಳ್ಳಂನ.

ತ್ಯಾಳಿನ ಒಲ್ಲಿಂ ಚಿರ್ಕುಟಂ ಪೀಳ್ಳಿಂನ.

ಹಿಂದಿಯಲ್ಲಿ ಲಾ, ಬೋಲ್, ಚುಕ್ ಮುಂತಾದ ಕ್ರಿಯಾಪದಗಳಿಗೆ ನ ಪ್ರತ್ಯಯದಿಂದ ವಿನಾಯಿತಿ ಇರುವಂತೆ ಚಿತ್ಪಾವನಿಯಲ್ಲೂ ಸಕರ್ಮಕ ವಾಕ್ಯವಾದರೂ ನ ಪ್ರತ್ಯಯ ಸೇರಿಕೊಳ್ಳದ ಕೆಲವು ಅಪವಾದಗಳು ಇವೆ.
ರಾಮು ಗಂಜಿ ಜ್ಸೇಯ್ಲೊ. ರಾಮು ದೂಧ ಪ್ಯೇಲೊ. ಸೀತಾ ಗಂಜಿ ಜ್ಸೇಯ್ಲಿ. ಸೀತಾ ದೂಧ ಪ್ಯೇಲಿ. ಮಾಂಕಡ ದೂಧ ಪ್ಯೇಲಂ.

ಇಲ್ಲಿ ಅಕರ್ಮಕದಂತೆ ಕರ್ತೃಪದಕ್ಕನುಸಾರವಾಗಿ ಕ್ರಿಯಾಪದದ ರೂಪ ಇರುತ್ತದೆ. ಕರ್ಮಪದಗಳಾದ ಗಂಜಿ, ದೂಧ ಪದಗಳು ಯಾವ ಲಿಂಗ ಎಂದು ನೋಡದೆ ಕರ್ತೃಪದಗಳಾದ ರಾಮು, ಸೀತಾ, ಮಾಂಕಡಗಳಿಗೆ ಅನುಗುಣವಾಗಿ ಕ್ರಿಯಾಪದ ಬದಲಾಯಿತು.

ವಿವಿಧ ಲಿಂಗ, ಪುರುಷ, ಕಾಲ ಮತ್ತು ವಚನಗಳಲ್ಲಿ ಸಕರ್ಮಕ ವಾಕ್ಯಗಳನ್ನು **ತಖ್ತೆ 3a, ತಖ್ತೆ 3b** ಮತ್ತು **ತಖ್ತೆ 3C**ಗಳಲ್ಲಿ ಪಟ್ಟಿ ಮಾಡಲಾಗಿದೆ. ಇದರಲ್ಲಿ ಉಂಡೊ(ಪು), ಚಪಾತಿ (ಸ್ತ್ರೀ) ಮತ್ತು ಕೇಳಂ(ನ) ಎಂಬ ಮೂರು ವಚನಗಳ ಕರ್ಮಪದಗಳನ್ನು ಬಳಸಿ ವಾಕ್ಯಗಳು ಹೇಗೆ ಬದಲಾಗುತ್ತವೆ ಎಂದು ತೋರಿಸಲಾಗಿದೆ. ಭೂತಕಾಲ ಪ್ರಥಮ ಪುರುಷ ಏಕವಚನದಲ್ಲಿ ಮಾತ್ರ ನ ಪ್ರತ್ಯಯ ಬಂದುದನ್ನು ಗಮನಿಸಬಹುದು. ಬಹುವಚನದಲ್ಲಿ ಅದು ಯಿಂ ಆಗಿದೆ.

ಕೆಲವೊಂದು ಭವಿಷ್ಯತ್ ಕಾಲದ ವಾಕ್ಯಗಳಲ್ಲೂ ನ ಪ್ರತ್ಯಯದ ಪ್ರಯೋಗ ಇರಬಹುದು.
ಉದಾ: ರಾಮಾನ ಯುದ್ಧ ಕರವ್ಚನ. ಸೀತಾನ ಅಗ್ನಿಪರೀಕ್ಷಾ ದೇವಚ್ಛೀನ.

# ತಖ್ತೆ 3a

| ಸಕರ್ಮಕ ಕಾಲ ಲಿಂಗ ಪುರುಷ ವಚನ ಉದಾಹರಣೆ | | | | | | | | |
|---|---|---|---|---|---|---|---|---|
| ಕರ್ತೃ ಲಿಂಗ | ಕಾಲ | ಕರ್ಮಪದ ಲಿಂಗ | ಉತ್ತಮ ಪುರುಷ (ಮೆಂ, ಆಮ್ಹಿಂ) | | ಮಧ್ಯಮ ಪುರುಷ (ತೂ, ತುಮ್ಹಿಂ) | | ಪ್ರಥಮ ಪುರುಷ (ತೋ,ತೇ,ತೀ,ತ್ಯೋ,ತಂ,ತೀಂ) | |
| | | | ಏಕ ವಚನ | ಬಹು ವಚನ | ಏಕ ವಚನ | ಬಹು ವಚನ | ಏಕ ವಚನ | ಬಹು ವಚನ |
| ಪುಲ್ಲಿಂಗ | ಭೂತ ಕಾಳು | ಪುಲ್ಲಿಂಗ | ಮೆಂ ಉಂಡೊ ಖಾಧ್ಲೊ/ಖಾಟ್ಸಲೊಂ | ಆಮ್ಹಿ ಉಂಡೆ ಖಾಧ್ಲೆ/ಖಾಟ್ಸಲೊಂ | ತೂ ಉಂಡೊ ಖಾಧ್ಲೊಶಿ/ಖಾಟ್ಸಲೊಶಿ | ತುಮ್ಹಿ ಉಂಡೆ ಖಾಧ್ಲೆಯಿ/ಖಾಟ್ಸಲೇಥ | ತೇಳಿನ ಉಂಡೊ ಖಾಧ್ಲೊನು | ತೇಯಿಂ ಉಂಡೆ ಖಾಧ್ಲಿಂ |
| | | ಸ್ತ್ರೀಲಿಂಗ | ಮೆಂ ಚಪಾತಿ ಖಾಧ್ಲಿ/ಖಾಟ್ಸಲೊಂ | ಆಮ್ಹಿ ಚಪಾತ್ಯೊ ಖಾಧ್ಲ್ಯೊ/ಖಾಟ್ಸಲೊಂ | ತೂ ಚಪಾತಿ ಖಾಧ್ಲಿಶಿ/ಖಾಟ್ಸಲೊಶಿ | ತುಮ್ಹಿ ಚಪಾತ್ಯೊ ಖಾಧ್ಲ್ಯೊಯಿ/ಖಾಟ್ಸಲೇಥ | ತೇಳಿನ ಚಪಾತಿ ಖಾಧ್ಲಿನ | ತೇಯಿಂ ಚಪಾತ್ಯೊ ಖಾಧ್ಲಿಂ |
| | | ನಪುಂಸಕ ಲಿಂಗ | ಮೆಂ ಕೇಳಂ ಖಾಧ್ಲಂ/ಖಾಟ್ಸಲೊಂ | ಆಮ್ಹಿ ಕೇಳಿಂ ಖಾಧ್ಲಿಂ/ಖಾಟ್ಸಲೊಂ | ತೂ ಕೇಳಂ ಖಾಧ್ಲಂಶಿ/ಖಾಟ್ಸಲೊಶಿ | ತುಮ್ಹಿ ಕೇಳಿಂ ಖಾಧ್ಲಿಯಿಂ/ಖಾಟ್ಸಲೇಥ | ತೇಳಿನ ಕೇಳಂ ಖಾಧ್ಲನ | ತೇಯಿಂ ಕೇಳಿಂ ಖಾಧ್ಲಿಂ |
| | ವರ್ತಮಾನ ಕಾಳು | ಪುಲ್ಲಿಂಗ | ಮೆಂ ಉಂಡೊ ಖಾಂತು ಟ್ಸಂ | ಆಮ್ಹಿ ಉಂಡೆ ಖಾಂತ ಟ್ಸೊಂ | ತೂ ಉಂಡೊ ಖಾಂತು ಟ್ಸಶಿ | ತುಮ್ಹಿ ಉಂಡೆ ಖಾಂತ ಟ್ಸಾ | ತೋ ಉಂಡೊ ಖಾಂತು ಟ್ಸೆ | ತೇ ಉಂಡೆ ಖಾಂತ ಟ್ಸತಿ |
| | | ಸ್ತ್ರೀಲಿಂಗ | ಮೆಂ ಚಪಾತಿ ಖಾಂತು ಟ್ಸಂ | ಆಮ್ಹಿ ಚಪಾತ್ಯೊ ಖಾಂತ ಟ್ಸೊಂ | ತೂ ಚಪಾತಿ ಖಾಂತು ಟ್ಸಶಿ | ತುಮ್ಹಿ ಚಪಾತ್ಯೊ ಖಾಂತ ಟ್ಸಾ | ತೋ ಚಪಾತಿ ಖಾಂತು ಟ್ಸೆ | ತೇ ಚಪಾತ್ಯೊ ಖಾಂತ ಟ್ಸತಿ |
| | | ನಪುಂಸಕ ಲಿಂಗ | ಮೆಂ ಕೇಳಂ ಖಾಂತು ಟ್ಸಂ | ಆಮ್ಹಿ ಕೇಳಿಂ ಖಾಂತ ಟ್ಸೊಂ | ತೂ ಕೇಳಂ ಖಾಂತು ಟ್ಸಶಿ | ತುಮ್ಹಿ ಕೇಳಿಂ ಖಾಂತ ಟ್ಸಾ | ತೋ ಕೇಳಂ ಖಾಂತು ಟ್ಸೆ | ತೇ ಕೇಳಿಂ ಖಾಂತ ಟ್ಸತಿ |
| | ಭವಿಷ್ಯತ್ ಕಾಳು | ಪುಲ್ಲಿಂಗ | ಮೆಂ ಉಂಡೊ ಖಾಟ್ಸಂ | ಆಮ್ಹಿ ಉಂಡೆ ಖಾಟ್ಸೊಂ | ತೂ ಉಂಡೊ ಖಾಟ್ಸಶಿ | ತುಮ್ಹಿ ಉಂಡೆ ಖಾಟ್ಸಾ | ತೊ ಉಂಡೊ ಖಾಟ್ಸೆ | ತೇ ಉಂಡೆ ಖಾಟ್ಸತಿ |
| | | ಸ್ತ್ರೀಲಿಂಗ | ಮೆಂ ಚಪಾತಿ ಖಾಟ್ಸಂ | ಆಮ್ಹಿ ಚಪಾತ್ಯೊ ಖಾಟ್ಸೊಂ | ತೂ ಚಪಾತಿ ಖಾಟ್ಸಶಿ | ತುಮ್ಹಿ ಚಪಾತ್ಯೊ ಖಾಟ್ಸಾ | ತೊ ಚಪಾತಿ ಖಾಟ್ಸೆ | ತೇ ಚಪಾತ್ಯೊ ಖಾಟ್ಸತಿ |
| | | ನಪುಂಸಕ ಲಿಂಗ | ಮೆಂ ಕೇಳಂ ಖಾಟ್ಸಂ | ಆಮ್ಹಿ ಕೇಳಿಂ ಖಾಟ್ಸೊಂ | ತೂ ಕೇಳಂ ಖಾಟ್ಸಶಿ | ತುಮ್ಹಿ ಕೇಳಿಂ ಖಾಟ್ಸಾ | ತೊ ಕೇಳಂ ಖಾಟ್ಸೆ | ತೇ ಕೇಳಿಂ ಖಾಟ್ಸತಿ |

# ತಖ್ತೆ 3b

| ಕರ್ತೃ ಲಿಂಗ | ಕಾಲ | ಕರ್ಮಪದ ಲಿಂಗ | ಉತ್ತಮ ಪುರುಷ (ಮೆಂ, ಆಮ್ಹಿಂ) | | ಮಧ್ಯಮ ಪುರುಷ (ತೂ, ತುಮ್ಹಿಂ) | | ಪ್ರಥಮ ಪುರುಷ (ತೋ,ತೇ,ತೀ,ತ್ಯೋ,ತಂ, ತೀಂ) | |
|---|---|---|---|---|---|---|---|---|
| | | | ಏಕ ವಚನ | ಬಹು ವಚನ | ಏಕ ವಚನ | ಬಹು ವಚನ | ಏಕ ವಚನ | ಬಹು ವಚನ |
| ಸ್ತ್ರೀಲಿಂಗ | ಭೂತ ಕಾಳು | ಪುಲ್ಲಿಂಗ | ಮೆಂ ಉಂಡೊ ಖಾಧ್ಲೊ/ಖಾಳ್ಸಲ್ಯಂ | ಆಮ್ಹಿ ಉಂಡೆ ಖಾಧ್ಲೆ/ಖಾಳ್ಸಲ್ಯೊಂ | ತೂ ಉಂಡೊ ಖಾಧ್ಲೊಶಿ/ಖಾಳ್ಸಲಿಶಿ | ತುಮ್ಹಿ ಉಂಡೆ ಖಾಧ್ಲೆಯಿ/ಖಾಳ್ಸಲ್ಯೊಥ | ತ್ಯಾಳಿನ ಉಂಡೊ ಖಾಧ್ಲೊನು | ತ್ಯಾಯಿಂ ಉಂಡೆ ಖಾಧ್ಲಿಂ |
| | | ಸ್ತ್ರೀಲಿಂಗ | ಮೆಂ ಚಪಾತಿ ಖಾಧ್ಲಿ/ಖಾಳ್ಸಲ್ಯಂ | ಆಮ್ಹಿ ಚಪಾತ್ಯೊ ಖಾಧ್ಲ್ಯೊ /ಖಾಳ್ಸಲ್ಯೊಂ | ತೂ ಚಪಾತಿ ಖಾಧ್ಲಿಶಿ/ಖಾಳ್ಸಲಿಶಿ | ತುಮ್ಹಿ ಚಪಾತ್ಯೊ ಖಾಧ್ಲ್ಯೊ ಯಿ/ಖಾಳ್ಸಲ್ಯೊಥ | ತ್ಯಾಳಿನ ಚಪಾತಿ ಖಾಧ್ಲಿನ | ತ್ಯಾಯಿಂ ಚಪಾತ್ಯೊ ಖಾಧ್ಲಿಂ |
| | | ನಪುಂಸಕಲಿಂಗ | ಮೆಂ ಕೇಳಂ ಖಾಧ್ಲಂ/ಖಾಳ್ಸಲ್ಯಂ | ಆಮ್ಹಿ ಕೇಳಿಂ ಖಾಧ್ಲಿಂ/ಖಾಳ್ಸಲ್ಯೊಂ | ತೂ ಕೇಳಂ ಖಾಧ್ಲಂಶಿ/ಖಾಳ್ಸಲಿಶಿ | ತುಮ್ಹಿ ಕೇಳಿಂ ಖಾಧ್ಲಿಯಿಂ/ಖಾಳ್ಸಲ್ಯೊಥ | ತ್ಯಾಳಿನ ಕೇಳಂ ಖಾಧ್ಲನ | ತ್ಯಾಯಿಂ ಕೇಳಿಂ ಖಾಧ್ಲಿಂ |
| | ವರ್ತಮಾನ ಕಾಳು | ಪುಲ್ಲಿಂಗ | ಮೆಂ ಉಂಡೊ ಖಾಂತಿ ಛ್ಸಂ | ಆಮ್ಹಿ ಉಂಡೆ ಖಾಂತಿ ಛ್ಸೊಂ | ತೂ ಉಂಡೊ ಖಾಂತಿ ಛ್ಸಶಿ | ತುಮ್ಹಿ ಉಂಡೆ ಖಾಂತಿ ಛ್ಸಾ | ತೀ ಉಂಡೊ ಖಾಂತಿ ಛ್ಸೆ | ತ್ಯೋ ಉಂಡೆ ಖಾಂತಿ ಛ್ಸತಿ |
| | | ಸ್ತ್ರೀಲಿಂಗ | ಮೆಂ ಚಪಾತಿ ಖಾಂತಿ ಛ್ಸಂ | ಆಮ್ಹಿ ಚಪಾತ್ಯೊ ಖಾಂತಿ ಛ್ಸೊಂ | ತೂ ಚಪಾತಿ ಖಾಂತಿ ಛ್ಸಶಿ | ತುಮ್ಹಿ ಚಪಾತ್ಯೊ ಖಾಂತಿ ಛ್ಸಾ | ತೀ ಚಪಾತಿ ಖಾಂತಿ ಛ್ಸೆ | ತ್ಯೋ ಚಪಾತ್ಯೊ ಖಾಂತಿ ಛ್ಸತಿ |
| | | ನಪುಂಸಕಲಿಂಗ | ಮೆಂ ಕೇಳಂ ಖಾಂತಿ ಛ್ಸಂ | ಆಮ್ಹಿ ಕೇಳಿಂ ಖಾಂತಿ ಛ್ಸೊಂ | ತೂ ಕೇಳಂ ಖಾಂತಿ ಛ್ಸಶಿ | ತುಮ್ಹಿ ಕೇಳಿಂ ಖಾಂತಿ ಛ್ಸಾ | ತೀ ಕೇಳಂ ಖಾಂತಿ ಛ್ಸೆ | ತ್ಯೋ ಕೇಳಿಂ ಖಾಂತಿ ಛ್ಸತಿ |
| | ಭವಿಷ್ಯತ್ ಕಾಳು | ಪುಲ್ಲಿಂಗ | ಮೆಂ ಉಂಡೊ ಖಾಛ್ಸಂ | ಆಮ್ಹಿ ಉಂಡೆ ಖಾಛ್ಸೊಂ | ತೂ ಉಂಡೊ ಖಾಛ್ಸಶಿ | ತುಮ್ಹಿ ಉಂಡೆ ಖಾಛ್ಸಾ | ತೀ ಉಂಡೊ ಖಾಛ್ಸೆ | ತ್ಯೋ ಉಂಡೆ ಖಾಛ್ಸತಿ |
| | | ಸ್ತ್ರೀಲಿಂಗ | ಮೆಂ ಚಪಾತಿ ಖಾಛ್ಸಂ | ಆಮ್ಹಿ ಚಪಾತ್ಯೊ ಖಾಛ್ಸೊಂ | ತೂ ಚಪಾತಿ ಖಾಛ್ಸಶಿ | ತುಮ್ಹಿ ಚಪಾತ್ಯೊ ಖಾಛ್ಸಾ | ತೀ ಚಪಾತಿ ಖಾಛ್ಸೆ | ತ್ಯೋ ಚಪಾತ್ಯೊ ಖಾಛ್ಸತಿ |
| | | ನಪುಂಸಕಲಿಂಗ | ಮೆಂ ಕೇಳಂ ಖಾಛ್ಸಂ | ಆಮ್ಹಿ ಕೇಳಿಂ ಖಾಛ್ಸೊಂ | ತೂ ಕೇಳಂ ಖಾಛ್ಸಶಿ | ತುಮ್ಹಿ ಕೇಳಿಂ ಖಾಛ್ಸಾ | ತೀ ಕೇಳಂ ಖಾಛ್ಸೆ | ತ್ಯೋ ಕೇಳಿಂ ಖಾಛ್ಸತಿ |

# ತಖ್ತೆ 3c

| ಕರ್ತೃ ಲಿಂಗ | ಕಾಲ | ಕರ್ಮಪದ ಲಿಂಗ | ಉತ್ತಮ ಪುರುಷ (ಮೆಂ, ಆಮ್ಹಿಂ) | | ಮಧ್ಯಮ ಪುರುಷ (ತೂ, ತುಮ್ಹಿಂ) | | ಪ್ರಥಮ ಪುರುಷ (ತೋ,ತೇ,ತೀ,ತ್ಯೋ,ತಂ, ತೀಂ) | |
|---|---|---|---|---|---|---|---|---|
| | | | ಏಕ ವಚನ | ಬಹು ವಚನ | ಏಕ ವಚನ | ಬಹು ವಚನ | ಏಕ ವಚನ | ಬಹು ವಚನ |
| ನಪುಂಸಕ ಲಿಂಗ | ಭೂತ ಕಾಳು | ಪುಲ್ಲಿಂಗ | | | | | ತೇಳಿನ ಉಂಡೊ ಖಾಧ್ಲೊನು | ತೇಯಿಂ ಉಂಡೆ ಖಾಧ್ಲಿಂ |
| | | ಸ್ತ್ರೀಲಿಂಗ | | | | | ತೇಳಿನ ಚಪಾತಿ ಖಾಧ್ಲಿನ | ತೇಯಿಂ ಚಪಾತ್ಯೊ ಖಾಧ್ಲಿಂ |
| | | ನಪುಂಸಕ ಲಿಂಗ | | | | | ತೇಳಿನ ಕೇಳಂ ಖಾಧ್ಲನ | ತೇಯಿಂ ಕೇಳಿಂ ಖಾಧ್ಲಿಂ |
| | ವರ್ತಮಾನ ಕಾಳು | ಪುಲ್ಲಿಂಗ | | | | | ತಂ ಉಂಡೊ ಖಾಂತ ಛ್ಸೆ | ತೀಂ ಉಂಡೆ ಖಾಂತಂ ಛ್ಸತಿ |
| | | ಸ್ತ್ರೀಲಿಂಗ | | | | | ತಂ ಚಪಾತಿ ಖಾಂತ ಛ್ಸೆ | ತೀಂ ಚಪಾತ್ಯೊ ಖಾಂತಂ ಛ್ಸತಿ |
| | | ನಪುಂಸಕ ಲಿಂಗ | | | | | ತಂ ಕೇಳಂ ಖಾಂತ ಛ್ಸೆ | ತೀಂ ಕೇಳಿಂ ಖಾಂತಂ ಛ್ಸತಿ |
| | ಭವಿಷ್ಯತ್ ಕಾಳು | ಪುಲ್ಲಿಂಗ | | | | | ತಂ ಉಂಡೊ ಖಾಛ್ಸೆ | ತೀಂ ಉಂಡೆ ಖಾಛ್ಸತಿ |
| | | ಸ್ತ್ರೀಲಿಂಗ | | | | | ತಂ ಚಪಾತಿ ಖಾಛ್ಸೆ | ತೀಂ ಚಪಾತ್ಯೊ ಖಾಛ್ಸತಿ |
| | | ನಪುಂಸಕ ಲಿಂಗ | | | | | ತಂ ಕೇಳಂ ಖಾಛ್ಸೆ | ತೀಂ ಕೇಳಿಂ ಖಾಛ್ಸತಿ |

## ಶಿ ಪ್ರತ್ಯಯ

ಇದು ಇಂಗ್ಲೀಷ್ ಭಾಷೆಯ `ಶಿ' ಅಲ್ಲ. ಸಂಭಾಷಣೆಯಲ್ಲಿ ಸಂಬಂಧಿಕರನ್ನು ಉಲ್ಲೇಖಿಸುವಾಗ ಸೇರುವ `ಶಿ'. ಉದಾಹರಣೆಗೆ `ತುಝ್ಯೊ ದಾದ್ದಾಶಿ ಏದಾ ಆಮ್ಗಾ ಯೇಂತು' (ನಿನ್ನ ತಂದೆಯವರು ಒಮ್ಮೆ ನಮ್ಮಲಿಗೆ ಬರಲಿ), `ತುಝ್ಯೊ ಭಾವುಶಿ ಆಯ್ಲೊ ನಾಹಿಂಕಾ' (ನಿನ್ನ ತಮ್ಮ ಬರಲಿಲ್ಲವೇ), `ತೇಲಾ ತೀಘ ಕಾಕ್ಕಾಶಿಖೆ' (ಅವನಿಗೆ ಮೂವರು ಚಿಕ್ಕಪ್ಪ / ದೊಡ್ಡಪ್ಪಂದಿರಂತೆ) ಇಂಥ ಪ್ರಯೋಗಗಳನ್ನು ನಾವು ಕಾಣುತ್ತೇವೆ. ಮಧ್ಯಮ ಪುರುಷ(ತೂ, ತುಮ್ಹಿ) ಮತ್ತು ಪ್ರಥಮ ಪುರುಷದ (ತೋ, ತೀ, ತೇ, ತ್ಯೋ) ಇಂಥ ಸಂಬಂಧಗಳನ್ನು ಉಲ್ಲೇಖಿಸುವಾಗ ಯಾವಾಗಲೂ ಶಿ ಪ್ರಯೋಗ ಇರುತ್ತದೆ. ತುಜ್ಹೊ ದಾದ್ದಾಶಿ, ತುಮ್ಚ್ಯೊ ಕಾಕ್ಕಾಶಿ, ತೇಚ್ಯೊ ಭಾವುಶಿ, ತ್ಯಾಚ್ಯೊ ಮಾಮ್ಮಾಶಿ, ತೆಂಚ್ಯೊ ಆಜ್ಯೊಬಾಶಿ, ತ್ಯಾಂಚಿ ಮೆಹೋಣಿಶಿ ಇತ್ಯಾದಿ.

ಉತ್ತಮ ಪುರುಷದ(ಮೆಂ, ಆಮ್ಹಿಂ) ಸಂಬಂಧ ಹೇಳುವಾಗ ಶಿ ಪ್ರಯೋಗ ಸಾರ್ವತ್ರಿಕ ಅಲ್ಲ. ದಾದ್ದಾ, ಆಯ್ಯೆ, ಮಾಮ್ಮಾ, ಮಾವಿ, ಆಜ್ಯೊಬಾ, ಮೊಟ್ಟಿ ಆಯ್ಯೆ , ಆಣ್ಣಾ, ಕಾಕ್ಕಾ ಇತ್ಯಾದಿ ಹಿರಿಯರ ಉಲ್ಲೇಖ ಮಾಡುವಾಗ ಶಿ ಪ್ರಯೋಗ ಇಲ್ಲ. ಮಾಝ್ಯೊ ದಾದ್ದಾ, ಮಾಜ್ಹಿ ಆಯ್ಯೆ, ಮಾಜ್ಹೊ ಮಾಮ್ಮಾ, ಮಾಜ್ಹೊ ಆಣ್ಣಾ ಹೀಗೆ ಹೇಳುತ್ತೇವೆ ವಿನಃ ಮಾಝ್ಯೊ ದಾದ್ದಾಶಿ, ಮಾಜ್ಹಿ ಆಯ್ಯೆಶಿ, ಮಾಝ್ಯೊ ಮಾಮ್ಮಾಶಿ ಎಂದು ಹೇಳುವುದಿಲ್ಲ. ಆದರೆ ಬಹುವಚನದಲ್ಲಿ ದೊಡ್ಡವರಿಗೂ ಶಿ ಪ್ರಯೋಗ ಇದೆ.

ಉದಾ : ಆಮ್ಚ್ಯೆ ಚ್ಯೋಘ ಮಾಮ್ಮಾಶಿ ಅಮೇರಿಕಾಂತು ಛ್ಸತಿ, ಮಾಜ್ಹೆ ದೋಘ ಆಣ್ಣಾಶಿಯಿ ವೇದ ವಿದ್ಯಾ ಪಾರಂಗತ. ಆದರೆ ಚಿಕ್ಕವರ ಉಲ್ಲೇಖ ಮಾಡುವಾಗ ಉತ್ತಮ ಪುರುಷದಲ್ಲಿಯೂ ಸಾರ್ವತ್ರಿಕ ಶಿ ಪ್ರಯೋಗ ಇದೆ. ಉದಾ : ಮಾಜ್ಹೊ ಭಾವುಶಿ, ಆಂಚ್ಯೊ ಬೆಹೆಣಿಶಿ, ಮಾಜ್ಹೊ ಜ್ಸಾವಯಿಶಿ, ಆಮ್ಚ್ಯೆ ನಾತ್ತುಶಿ.

ಶಿ ಪ್ರತ್ಯಯ ಸೇರಿರುವ ಶಬ್ದಕ್ಕೆ ನ ಸೇರುವುದಾದರೆ ಮೊದಲು ನ, ನಂತರ ಶಿ ಇರುತ್ತದೆ.
ಉದಾ : ತೇಚ್ಸೆ ದಾದ್ದಾನಶಿ ಸಂಧ್ಯಾ ಶಿಕ್ಯೆಯ್ಲಿನ.

ಮಧ್ಯಮ ಪುರುಷ ಏಕವಚನದ ವಾಕ್ಯಗಳ ಕ್ರಿಯಾಪದದಲ್ಲೂ ಶಿ ಪ್ರತ್ಯಯ ಸೇರಿಕೊಳ್ಳುವುದಿದೆ.
ಉದಾ : ತೂ ಕೇಳಂ ಖಾಧ್ಲಂಶಿ, ತೂ ವಿಸ್ರಲಿಶಿ, ತೂ ಚ್ಸಾಲ್ಲೋತು ಛ್ಸಶಿ. ತೂ ಚಿರ್ಕುಟಂ ಹೋಳೀತಿ ಛ್ಸಲಿಶಿ. ತೂ ಹೇಂ ಕಾಮ ಕರ್ಶೀರ.

## ಉಪಸಂಹಾರ

ಚಿತ್ಪಾವನೀ ಭಾಷೆ ಎಂಬ ಮಹಾ ಸಾಗರದಲ್ಲಿರುವ ವ್ಯಾಕರಣ ಎಂಬ ಹಿಮಗಡ್ಡೆಯ ಶಿಖರವನ್ನು ಮಾತ್ರ ನಾವಿಲ್ಲಿ ನೋಡಿರುವುದು. ಶಿಷ್ಟ ಚಿತ್ಪಾವನೀ ಮಾತನಾಡಿ ಶುದ್ಧ ಚಿತ್ಪಾವನೀ ಬರೆಯಲು ಇದು ಸ್ವಲ್ಪವಾದರೂ ಸಹಾಯಕ ಎನ್ನಿಸೀತು ಎಂಬ ನಂಬಿಕೆ ಇದೆ.

**ಚಿದಂಬರ ಕಾಕತ್ಕರ್**